# ಶೂರ ಸವಾರ

ಅಥವಾ

# ರುದ್ರಾಕ್ಷಿ

ಬರೆದವರು:

— ರಾಮಲಿಂಗ —

(ಪ್ರಥಮ ಸಹಸ್ರ.)

೧೯೩೫

— ನಾಲ್ಕಾಣೆ —

# ಸಂಘಸಮ್ಮತಿ.

"ಶೂರ ಸವಾರ ಅಥವಾ ರುದ್ರಾಕ್ಷಿ" ಎಂಬ ಚಿಕ್ಕ ಕಥೆಯನ್ನು ಸಂಪೂರ್ಣವಾಗಿ ಓದಿದೆವು. ಕಥೆಯು ಹಳೆಯ ಪದ್ಧತಿಯದಾಗಿದ್ದು, ನಡನಡುವೆ ಈಗಿನ ಪರಿಸ್ಥಿತಿಯ ವಿಷಯಗಳ ಝುಳುಕು ತೋರುವದಲ್ಲದೆ, ಗೂಢ ಒಡಪಿನ ಹಾಗೆ ತೋರುತ್ತದೆ. ಭಾಷೆಯು ಸುಂದರ-ಸರಳ-ಸವಿ ಇರುವದು. ಮೊದಮೊದಲು ವಿಷಯವು ಮನೋರಂಜಕವಾಗಿದ್ದು, ಕೊನೆಯ ಭಾಗವನ್ನು ಬೇಗನೆ ಮುಗಿಸಿದ ಹಾಗೆ ತೋರುತ್ತದೆ.

ಲೇಖಕರು ಹೊಸಬರಾದರೂ ಚನ್ನಾಗಿ ಪರಿಶ್ರಮ ಮಾಡಿದವರಂತೆ ಬರೆದಿರುವರು. ಕಥೆಯ ರಚನೆಯ ಕ್ರಮ, ಅದರ ಉದ್ದೇಶಗಳ ಸಂಬಂಧದಿಂದ ಲೇಖಕರೇ ನಾಲ್ಕು ಮಾತು ಬರೆದರೆ, ವಾಚಕರಿಗೆ ವಿಶೇಷ ಅನುಕೂಲವಾಗುವದೆಂದು ನಮಗೆ ತೋರುತ್ತದೆ.

ವೇ. ಶಿ. ಕುಲಕರ್ಣಿ,
ಗಳಗನಾಥ.

# ನಮ್ಮ ಮಾತು.

'ನಮ್ಮ ಮಾತ'ನ್ನು ಬರೆಯುವ ರೂಢಿಯನ್ನು ಉಲ್ಲಂಘಿಸಲು ನಾವು ಮೊದಲು ಮನಸ್ಸು ಮಾಡಿದ್ದೆವು. ದೈವವಶಾತ್ ಶ್ರೀ. ವೆ. ತಿ. ಕುಲಕರ್ಣಿ, ಗಳಗನಾಥ ಮಾಸ್ತರವರ ಮುನ್ನುಡಿಯು ನಮಗೆ ದೊರೆಯಿತು. ತಮ್ಮ ಕೆಲಸದಲ್ಲಿ ತೊಡಗಿದ್ದರೂ ಸವಡು ಮಾಡಿಕೊಂಡು, ಅಪರಿಚಿತರಾದ ನಮ್ಮ ಒಂದೇ ಪತ್ರಕ್ಕೆ ಮನ್ನಣೆ ಕೊಟ್ಟು, ಮುನ್ನುಡಿಯನ್ನು ಬರೆದು ಕಳುಹಿ ಸಿದ್ದಕ್ಕಾಗಿ ನಾವು ಅವರಿಗೆ ಚಿರಋಣಿಯಾಗಿದ್ದೇವೆ. 'ಲೇಖಕರೇ ನಾಲ್ಕು ಮಾತುಗಳನ್ನು ಬರೆದರೆ ವಾಚಕರಿಗೆ ಅನುಕೂಲವಾಗುವದೆ'ಂದು ಅವರು ಅಭಿಪ್ರಾಯಪಟ್ಟದ್ದರಿಂದ 'ನಮ್ಮ ಮಾತು' ಹೊರಬಿದ್ದಿತು. ಕಥೆಯು ಹಳೆಯ ಮಾದರಿಯದೆ. ಆದರೆ ಹಳೆಯ ಪಾತ್ರೆಯಲ್ಲಿ ಹೊಸ ಸ್ನಾನಕ. ಕಥಾವಿಷಯವು ಅಷ್ಟು ಗೂಢವಾಗಿಲ್ಲವೆಂದು ನಮಗೆನಿಸುತ್ತದೆ. ಸವಾರನು ಹೊನ್ನಿನ ಕೊಡವನ್ನು ತರಲಿಕ್ಕೆ ಹೊರಟಿರಲು ಮಾರ್ಗದಲ್ಲಿ ಅನೇಕ ತೊಂದರೆಗಳು ಆತನಿಗೆ ಬಂದೊದಗುವವು. ಆತನಿಗೆ ಸಹಾಯ ಮಾಡಿದ ಕುದುರೆ, ರುದ್ರಾಕ್ಷಿ ಮೊದಲಾದವುಗಳನ್ನು ಕಾಳಿಕಾ ಗುಡಿಯೊಳಗಿನ ಮುನಿಯು ಕೊಟ್ಟಿದ್ದನು. ಈ ಮುನಿಯೇ ಮಾಯವಾಗಿ ಹೋದ ಕಲ್ಲ ಮಲ್ಲ ಅವರ 'ಎಜ್ಜನು.' ಈ 'ಎಜ್ಜನೇ' ಅರಣ್ಯದ ಮಧ್ಯದಲ್ಲಿ ಸವಾರನಿಗೆ ಭೆಟ್ಟಿಯಾದ ಸಾಧುಪುರುಷನು. ಅನಂತರ ಎಜ್ಜನು ಪ್ರಾಣ ಬಿಟ್ಟಿರಬೇಕು. ಸವಾರನಿಗೆ ಮುಂದೆ ಯಾರೂ ಸಹಾಯ ಮಾಡುವವರು ಇಲ್ಲ ಯದೇ ಇದ್ದ ಕಾರಣ, ಸವಾರನೂ, ಕೆಲವು ಅನಿವಾರ್ಯ ಪ್ರಸಂಗದ ಮೂಲಕ ಪ್ರಾಣವನ್ನು ತ್ಯಜಿಸಿದನು. ಮಹತ್ಕಾರ್ಯ ಸಾಧನೆಗಾಗಿ ತಮ್ಮ ತನು-ಮನ-ಧನಗಳನ್ನರ್ಪಿಸಲು ಸಿದ್ಧರಾದ ಮಹಾಪುರುಷರಿಗೆ ವಿಘ್ನಗಳೆಷ್ಟು ಎಂಬುದನ್ನೂ, ಕಾರ್ಯವು ಸಾಧಿಸಿದ ಮೇಲೆ ಆ ಕಾರ್ಯದ ದುರುಪಯೋಗ ಅಥವಾ ಅನ್ಯಥಾ ಲಾಭಗಳು ಹೇಗಾಗುತ್ತವೆಂಬುದನ್ನೂ ವಾಚಕರು ಈ ಕಥೆಯಿಂದ ತಿಳಿದುಕೊಳ್ಳಬಹುದು.

ಗ್ರಂಥಕರ್ತ.

# ಶೂರ ಸವಾರ

ಅಥವಾ

# ರುದ್ರಾಕ್ಷಿ.

---

ಇಗೋ! ಇಗೋ!! ಇಲ್ಲಿ! ಇಲ್ಲಿ!! ಓಡುತಿದೆ! ಓಡುತಿದೆ!! ಭೂಮಿಗೆ ತಾಕದೆ, ಕೆಂಧೂಳಿಯನೆಬ್ಬಿಸಿ, ಗಾಳಿವೇಗವ ಮೀರಿ ಓಡುತಿದೆ!!! ವೀರಾಗ್ರಣಿ ಕಿವಿವರೆಗುಗಿದು ಬಿಟ್ಟ ಬಾಣದಂತೆ, ಮುಗಿಲಬ್ಬರದಿ ಸಳೆವ ಮಿಂಚಿನ ಹೊಳಪಿನಂತೆ, ಇಲ್ಲಿ ಕಂಡದ್ದು ಇಲ್ಲಿಲ್ಲ, ಒಂದು ನಿಮಿಷ ಮಾತ್ರಕ್ಕೆ ನಾಸಿರ ಗಾವುದ ದೂಗ ಹೋಗುತ್ತಿದೆ. ಕಂಡವರೇ ಕಂಡಾರು, ಕಾಣದವರಿಗಿಲ್ಲ. ಬಸ್ರಿ! ಬಸ್ರಿ!! ಇಗೋ ಇಲ್ಲಿ! ಇಲ್ಲಿ!! ಅಲ್ಲಿ!! ಅಬ್ಬಬ್ಬ!!! ಧೂಳಿ! ಧೂಳಿ!! ಓಹೋ! ಓಹೋ!! ದೂರ ಹೋಯಿತು. ಹೋಯಿತು, ಹೋಯಿತು! ಕಣ್ಮರೆಯಾಯಿತು! ಕಣ್ಮರೆಯಾಯಿತು!!– ಸವಾರಿಕುದುರೆಯೊಂದು ಮಾಯವಾಯಿತು.

ಒಂದು ವಿಶಾಲವಾದ ಬೈಲುಪ್ರದೇಶ, ಗಿಡಗಂಟೆಗಳ ಜೊಂಪಿಲ್ಲ, ಊರು ಪಟ್ಟಣಗಳ ಸುಳಿವೂ ಇಲ್ಲ. ದೂರದಲ್ಲಿ ಭೂಮಿ ಆಕಾಶಗಳು ಒಂದಕ್ಕೊಂದು ಕೂಡಿದಂತೆ ಕಾಣುತ್ತವೆ. ಕ್ಷಿತಿಜದ ದಂಡೆಗೆ ನೀಲ ವರ್ಣದ ಸಣ್ಣ ಸಣ್ಣ ಗುಡ್ಡಗಳು, ಅಲ್ಲಲ್ಲಿ ಹೊಳೆಯುವ ಜಲಾಶಯಗಳು, ಅತ್ತಿತ್ತ ಆನಂದಸಾಗರದಲ್ಲಿ ಲೋಲಾಡುವ ಜಿಂಕೆಮೃಗಗಳು, ಆಹ್ಲಾದಕರ ವಾದ ಬೆಳದಿಂಗಳು, ಶಾಂತಿಪ್ರದವಾದ ವಾತಾವರಣ, ದಕ್ಷಿಣ ಪಶ್ಚಿಮ ಮೂಲೆಗೆ ಒಂದೇ ಒಂದು ದೊಡ್ಡ ಆಲದ ಮರ, ಆ ಮರದಡಿಗೆ ಕೆಲವು ಸಣ್ಣ ಗುಡಿಸಲುಗಳು, ಇದಲ್ಲದೆ ಮತ್ತೇನೂ ವಿಶೇಷ ತೋರುವದಿಲ್ಲ. ಈ ಸಮಯದಲ್ಲಿ ಆದೇ ಸಂಜೆಯ ಊಟ ಮುಗಿಸಿಕೊಂಡು, ಗುಡಿಸಲದ ಹೊರಗೆ, ಗಾಳಿಗೆ ಮೈಯೊಡ್ಡಿ, ಎಲೆ-ಅಡಕಿ ಕಲಬತ್ತಿನಸಲ್ಲಿ ಕುಟ್ಟುತ್ತ, ಒಬ್ಬಾನೊಬ್ಬ ಮುದುಕನು ಹತ್ತಿರ ಬಡಿಗೆ ಇಟ್ಟುಕೊಂಡು ಕಂಬಳಿಯ ಮೇಲೆ ಕುಳಿತಿದ್ದನು. ಕುಟ್ಟಿದ ತಾಂಬೂಲವನ್ನು ಬಾಯಲ್ಲಿ ಹಾಕಿ ಕೊಳ್ಳುವದಕ್ಕೆಂದು ಮೇಲಕ್ಕೆ ಮೋರೆ ಮಾಡಿದಾಗ್ಗೆ, ಟೊಂಗೆಗಳ ಸಂದಿ

ನೊಳಗೆ ಕಾಣುವ ಚಂದ್ರನನ್ನು ನೋಡಿ ನಗುವ, ಆಲ್ಹಾದಗೊಳ್ಳುವ, ಗುಡಿಸಲದೊಳಗಿನ ದನಿ ಕೇಳಿ ಖಿನ್ನನಾಗುವ, ಒಮ್ಮೆ ಒಳಗಿರುವ ಮಲ್ಲನನ್ನು ಕರೆವ, ಹಾಸ್ಯ ಮಾಡುವ, ಒಮ್ಮೆ ಯಾವದೋ ಒಂದು ವ್ಯಕ್ತಿಯನ್ನು ಸ್ಮರಿಸಿ, ಗುಣುಗುಟ್ಟುವ, ಕೈಮುಗಿವ, ಶಿರಬಾಗಿಸುವ, ಚಂದ್ರನಿಗೆ ಹೋಲಿಸಿ ಬೇಡುವ, 'ನಿನ್ನ ಹಾಗೆ ಜಗದೊಳಗೆಲ್ಲ ಬೆಳಗಲಿ! ಎಲ್ಲರಿಗೂ ಆನಂದವನ್ನುಂಟು ಮಾಡಲಿ!' ಎಂದು. ಅಷ್ಟರಲ್ಲಿ, ಕುದುರೆಯ ಖುರಪುಟದ ಸಪ್ಪಳವು ಕೇಳಬರುವದು. ನೆಲವು ಅದರಲಿಕ್ಕೆ ಹತ್ತಿತು, ಕಣ್ಣಿಗೆ ದೀಪ ಹಚ್ಚಿದಂತಾಗಿ ಮುದುಕನು ಬೆಚ್ಚಿಬಿದ್ದ. ಹಾಗೆಯೇ ಸಾವರಿಸಿಕೊಂಡು ಬಡಿಗೆಯನ್ನೂರಿ ಎದ್ದು ನಿಂತು ಗುಡಿಸಲ ಬಾಂಧವರನ್ನು ಕೂಗುತ್ತ, ಪಶ್ಚಿಮದಿಂದ ಪೂರ್ವಕ್ಕೆ ಹೋಗುವ ಒಂದು ತೇಜಃಪುಂಜವಾದ ವ್ಯಕ್ತಿಯನ್ನು ಕೈಮಾಡಿ ತೋರಿಸುತ್ತ, ಅದೇ ವೇಳೆಗೆ ನಡುಗುತ್ತ ಕುಣಿಯುತ್ತ, ಮುದುಕನು ಅಚ್ಚರಿ ಆನಂದಗೊಂಡಿದ್ದನು. ಉಳಿದವರೆಲ್ಲರೂ ಅದೇನಿರಬಹುದೆಂದು ಬೆದರಿ ಅತ್ಯಾಶ್ಚರ್ಯದಿಂದ ನೋಡುತ್ತ ನಿಂತಿದ್ದರು. ಅದೇನೆಂಬದು ಯಾರಿಗೂ ತಿಳಿಯದಾಯಿತು. ಎಲ್ಲರೂ ಮುದುಕನನ್ನು ಕುಳ್ಳಿರಿಸಿ, ಸುತ್ತಲೂ ತಾವು ಕುಳಿತು ಆ ಮುದುಕ ಅಜ್ಜನನ್ನು ವಿಚಾರಿಸತೊಡಗಿದರು. ಅವರಲ್ಲಿ ಮಲ್ಲನೆಂಬವನು—

'ಎಜ್ಜಾ! ಅಪಟ ವೇಗದಿಂದ್ಹೋದದ್ದೇನದು? ಕುದುರೆ ಸವಾರನ್ಹಂಗ ಕಾಣತಿತ್ತ.'

ಅಜ್ಜ:—'ಹೌದು, ತಮ್ಮಾ, ಅವನೊಬ್ಬ ಶೂರ ಕುದುರೆ ಸವಾರನು. ನಮ್ಮೆಲ್ಲರಿಗೂ ಬೇಕಾದವನು. ಈಟ ದಿನಗಳ ವರೆಗೆ ಹೋರಾಡಿ, ಕಡೆಗೆ ಪಶ್ಚಿಮದಿಂದ ಒಂದು ಒಳ್ಳೇ ಕುದುರೆಯನ್ನು ಹಿಡಿದು ತಂದಿದ್ದಾನೆ ಅದೇ ಈಗ ಹೋದ ಕುದುರೆ. ಇನ್ನೂ ಆ ಕುದುರೆ ಅವನ ಕೈಹಿಡಿತದಾಗ ಸಿಕ್ಕಿಲ್ಲ. ಆದರೂ ಜಾಬಾದ ಕುದುರೆ ಹತ್ತುವವ. ನಾನೆಂದಿಗೂ ನೋಡಿರಲಿಲ್ಲ. ಹಿಂದೆ ಮುಂದೆ ಎಂದೂ ಸಿಗಲಿಕ್ಕಿಲ್ಲ ಇಂಥ ಶೂರ ಸವಾರ.

ನಿಂಗ್ಯಾ:—ಹೌದೆಜ್ಜ! ಈಗ ಎಲ್ಲಿಗೆ ಹೋದ?

ಬಸ್ಯಾ:—ಹೂ! ಎತ್ತಾಗ ಹೋದ? ಆ ಗುಡ್ಡ ಏರಿ ಇಳಿದ ಮರಿಯಾದ! ಅಲ್ಲಿ ಯಾವ ದೇಶ?

ಕಲ್ಲ :—ಅಲ್ಲಾವ ದೇಶ ? ಕಲ್ಲದೇಶ!

ಬಸ್ಯಾ :—ಛೇ ! ಏಳ ಮಳ್ಳ, ಕಲ್ಲದೇಶದಾಗೇನೈತಿ ಇವಂದ? ಕಲ್ಲ ಹೊರಾಕ ಹೋಗತಾನೇನ? ಒಡ್ಡರವನ್ನ ಮಾಡಿದೇನ ಆವನ್ನ ? ನೀನೂ ಹೀಂಗ ಕಾಣತೀದೇಳ!

ಕಲ್ಲ :—ಕಲ್ಲ ಹೊರಾಕಲ್ಲ, ನಿನ್ನಂತ ಹುಂಬನ ತಲಿ ಮ್ಯಾಗ ಕಲ್ಲ ಹಾಕಾಕ !

(ಇಷ್ಟರಲ್ಲಿ ಮುದುಕನು ಬಾಯೊಳಗಿನ ಎಲಿ ಉಗುಳಿ)—

—ಏ ಕಲ್ಲ್ಯಾ! ಸುಮ್ಮನಿರೋ ಎಷ್ಟು ಮಾತಾಡತಿ ! ದೊಡ್ಡ ಓದ ಬಲ್ಲವರ್ಹಂಗ ಮಾತಾಡತಾನ.

ಕಲ್ಲ :—ಅಲ್ಲೆಜ್ಜ ! ಗುಡ್ಡದ ಹತ್ತರ ಕಲ್ಲಿರೋದಿಲ್ಲೇನಜ್ಜ? ಅದಕ್ಕ ನಾ ಕಲ್ಲದೇಶ ಅಂದ್ರ ಇವಗ ತಿಳಿಯಾ—ವೊಲ್ಲದು.

ಅಜ್ಜ :—ನೀ ಹೇಳಿದ್ದು ಖರೇಪ! ನಾವೂ ಬೇಕಾದರೆ ಅಲ್ಲಿಗೆ ಒಂದು ದಿವಸ ಹೋಗೋಣ - ಅದರ ವೈಭವ ನೋಡಾಕ ಎರಡ ಕಣ್ಣಿ ಸಾಲಾಕಿಲ್ಲ.

ಎಲ್ಲರೂ :—ಏನಂದಿ ಎಜ್ಜ! ಅಲ್ಲೇನೈತಿ ? ನಾವೂ ಹೋಗೋಣ ?

ಅಜ್ಜ:—ಅಲ್ಲಿ ಒಂದು ಭವ್ಯವಾ— ಹೀಗೆನ್ನುವದರೊಳಗೆ ಯಾವದೋ ಒಂದು ಅಶರೀರ ವ್ಯಕ್ತಿಯು ಬಂದು ಆ ಮುದುಕನನ್ನು ಎತ್ತಿಕೊಂಡು ಹೋಗಿ ಮಾಯವಾಯಿತು. ಇದನ್ನು ಕಂಡು ಎಲ್ಲರೂ ಬೆಚ್ಚಿಬಿದ್ದರು. ‘ಎಜ್ಜ ! ಎಜ್ಜ !!’ ಎಂದು ಕೂಗುತ್ತ ಗೋಳಿಟ್ಟರು. ಎಜ್ಜನು ಕಣ್ಣಿಗೆ ಕಾಣವೆ, ಕಿವಿಗೆ ಕೇಳದೆ ಮಾಯವಾದನು. ‘ಶಿವ ಮಹಾದೇವನು ಬಂದು ಕೈಲಾಸಕ್ಕೆತ್ತಿಕೊಂಡು ಹೋದನೋ ? ಪಿಶಾಚಿಗಳು ಮಾಟ ಮಾಡಿದವೋ? ಸುಡುಗಾಡಸಿದ್ಧರು ಮಂತ್ರ ಮಾಡಿದರೋ? ತಿಳಿಯದು.’ ಎಂದು ಬಗೆಬಗೆಯಿಂದ ವಿಚಾರಿಸಿ, ಕಡೆಗೆ ನಿರಾಶರಾಗಿ, ದುಃಖದಿಂದ ಎಜ್ಜನ ಕೋಲು, ಕಂಬಳಿ, ಕಲಬತ್ತು, ತೆಗೆದುಕೊಂಡು ಗುಡಿಸಲುಗಳನ್ನು ಸೇರಿದರು.

---

೨

ಶುಕ್ರವಾರ ರಾತ್ರಿ ಸಮಯ. ಸುಮಾರು ೧೨ ಗಂಟೆ. ಭಯಂಕರ ವಾದ ಕಾಳುಕತ್ತಲೆ ಮುಸುಕಿತ್ತು. ಆಕಾಶಮಂಡಲಗಳಲ್ಲಿ ಮಿನುಗುವ ನಕ್ಷತ್ರಗಳ ಛಾಯೆಯೇ ಛಾಯೆ; ಭೂತಪಿಶಾಚಿಗಳ ರೌದ್ರಭೂಮಿಯಂತೆ ಭೂಮಿಯೆಲ್ಲ ಕಾಳ್ಗತ್ತಲೆಯಲ್ಲಿ ಮುಚ್ಚಿತ್ತು. ದೊಡ್ಡ ದೊಡ್ಡ ಪರ್ವತ ಶ್ರೇಣಿಗಳು ಕತ್ತಲೆಯಲ್ಲಿ ಪೆಡಂಭೂತಗಳಂತೆ ತೋರುತ್ತಿದ್ದವು. ಯಾವದೂ ಸ್ಪಷ್ಟವಾಗಿ ಕಾಣಲೊಲ್ಲದು. ದಾರಿಬಟ್ಟೆಗಳಂತೂ ಆ ಗುಡ್ಡ ಗಾಡುಪ್ರದೇಶದಲ್ಲಿಲ್ಲವೇ ಇಲ್ಲ. ಮುಳ್ಳುಕಲ್ಲುಗಳು ತೆರಪಿಲ್ಲದೇ ಒಟ್ಟಿದ್ದವು. ಮುಳ್ಳುದಾರಿಯನ್ನಾದರೂ ಅನುಸರಿಸಬೇಕೆಂದರೆ ಅದೂ ಬಿಕ್ಕಟ್ಟಿನಲ್ಲಿ. ಎಡಕ್ಕೊಂದು ದೊಡ್ಡ ಕೊಳ್ಳ; ಪಾತಾಳಕ್ಕೆ ಸಮೀಪಿಸಿದಂತೆ ತೋರು ತ್ತಿತ್ತು. ಬಲಕ್ಕೊಂದು ಅಪಾರವಾದ ಕೊಳ್ಳ. ಇಂತಹ ನಿರ್ಮಾನುಷ ವಾದ ಪ್ರದೇಶದಲ್ಲಿ, ನೆನೆಸಿದರೆ ಎದೆಯೊಡೆಯುವಂತಹ ವೇಳೆಯಲ್ಲಿ, ಕುದು ರೆಯ ಸವಾರಿಯಾಗಿ ಬರುವ ವೀರನಾವನು? ಅವನ ಕಣ್ಣುಗಳು ಸಿಂಹದ ಕಣ್ಣುಗಳಂತೆ ಕತ್ತಲೆಯಲ್ಲಿ ಹೊಳೆಯುತ್ತಿದ್ದವು. ಅವನ ಮನಸ್ಸಿನಲ್ಲಿರುವ ಭಕ್ತಿವಿಶ್ವಾಸಗಳೇ ಅವನಿಗೆ ಮಾರ್ಗದರ್ಶಕಗಳಾಗಿದ್ದವು. ಅವನ ಬಾಹು ಬಲದ ತೇಜಸ್ಸೇ ಅವನ ಧೈರ್ಯಸಹಾಸಕ್ಕೆ ಅಣಿಯಾಗಿದೆ. ತಾನು ಕೈಕೊಂಡ ಮಹತ್ಕಾರ್ಯದ ಪುಣ್ಯಪ್ರಭಾವವೇ ಅವನ ಕುದುರೆಗೆ ಬಲಕೊಟ್ಟಿದೆ. ಹೀಗಿರಲು ಕೆಲವು ಹೊತ್ತಿನ ಮೇಲೆ ಏನೋ ಒಂದು ಆವೇಶ ಬಂದಂತಾಗಿ ಸವಾರನು ಕೈಯಲ್ಲಿರುವ ಚಬಕವನ್ನು ಛಡಾಸಲು, ಕುದುರೆಯು ಆಕ್ಷಣವೇ ಬಲಕ್ಕೆ ಅಡ್ಡದಾರಿ ಹಿಡಿದು, ಕೊಳ್ಳದೊಳಗೆ, ಒಳಗೆ, ಒಳಗೆ, ಜಾರುತ್ತ, ಜಾರುತ್ತ ಪಾತಾಳಕ್ಕೆ ಹೋಯಿತೋ ಎಂಬಂತೆ ಬಹು ವೇಗದಿಂದ ಕಣ್ಣಿಗೆ ಕಾಣದಷ್ಟು ದೂರ ಕೆಳಗಿಳಿಯಿತು. ಮುಂದೆ ಕೊಳ್ಳದ ನೆಲೆ ಮುಟ್ಟಿದ ಮೇಲೆ ಒಂದು ಭವ್ಯವಾದ ಹೆಬ್ಬಾಗಿಲು ತಾನಾ ಗಿಯೇ ತೆರೆದು ಸವಾರನನ್ನು ಒಳಗೆ ಸ್ವಾಗತ ಮಾಡಿಕೊಂಡಿತು. ಕೇಳು ವದೇನು! ಒಳಗೆ ಹೋಗುವದೊಂದೇ ತಡ, ಸಾವಿರಾರು ಸೂರ್ಯ ಚಂದ್ರರು ತಮ್ಮ ತೇಜಸ್ಸನ್ನೆಲ್ಲ ಒಟ್ಟುಗೂಡಿಸಿ ಇಲ್ಲಿ ಬಿಟ್ಟರೋ ಎಂಬಂತೆ ಸ್ವಚ್ಛವಾದ ಬೆಳಕು ಒಳಗೆ ಬಿದ್ದಿತು. ಸವಾರನು ಕಣ್ಣು ಕುಕ್ಕಿದಂತಾಗಿ

ಮುಂದೆ ಸಾಗದೆ ಬಹಳ ಹೊತ್ತಿನ ವರೆಗೆ ನಿಂತುಬಿಟ್ಟನು. ಕುದುರೆಯು ತಾನೇ ಸಾವರಿಸಿಕೊಂಡು ಮುಂದೆ ಸಾಗಿತು. ಅಷ್ಟರಲ್ಲಿ ಎದುರಿಗೆ ಮತ್ತೊಂದು ಹೆಬ್ಬಾಗಿಲು ತೆರೆದು ನಿಂತಿತ್ತು. ಅದನ್ನೂ ದಾಟಿ ನಡೆದ. ಹೀಗೆ ಮೂರು ಅಗಸೆ ಬಾಗಿಲುಗಳನ್ನು ದಾಂಟಿ ಕಡೆಗೆ ೬೩ ಪ್ರಾಕಾರದ ನಡುವೆ ಇದ್ದ ಒಂದು ಭವ್ಯವಾದ ಗುಡಿಯ ದ್ವಾರಕ್ಕೆ ಬಂದು ನಿಂತಿತು. ಸವಾರನು ಅದನ್ನು ನೋಡಿ ಸ್ವಲ್ಪ ಹೆದರಿದರೂ ಧೈರ್ಯತಾಳಿ, ಗುಡಿಯೊಳಗೆ ಹೋದನು. ಒಳಗಿನ ಮೂರ್ತಿಯನ್ನು ನೋಡಿದವನೇ ಕಣ್ಣಿಗೆ ಭೋಳಿ ಬಂದಂತಾಗಿ ನಿಶ್ಚೇತನಾಗಿ ಬಿದ್ದನು. ಅಗ್ನೆ ಮೇಲಿನಿಂದ ಅವನ ಮುಖದ ಮೇಲೆ ತಣ್ಣೀರಿನ ಧಾರೆ ಬೀಳತೊಡಗಿತು. ಆಮೇಲೆ ಸವಾರನು ಎಚ್ಚತ್ತು ದೇವಿಯ ಉಗ್ರಸ್ವರೂಪವನ್ನು ಕಂಡು, ದೈನ್ಯದಿಂದ ನಮಸ್ಕರಿಸಿ, ತಲೆಬಾಗಿಸಿ ಕುಳಿತುಕೊಂಡನು. ತನ್ನ ದೃಷ್ಟಿಕೋನದಿಂದ ಇಡೀ ಸೃಷ್ಟಿಯನ್ನೇ ಸುಡುವಂತಿದ್ದ ಆಕೆಯ ಕೆಂಪು ಕಣ್ಣುಗಳು, ಹಣೆತುಂಬ ಹಚ್ಚಿರುವ ಕುಂಕುಮದ ಪಟ್ಟೆಯೂ ಕೈಯಲ್ಲಿ ಹಿಡಿದಿರುವ ಖಡ್ಗವೂ ವಾಹನವಾಗಿದ್ದ ಸಿಂಹವೂ ಅದರ ತೀಕ್ಷ್ಣವಾದ ಹಲ್ಲುಗಳೂ ಆ ದೇವತೆಯ ಭಯಂಕರ ಸ್ವರೂಪವನ್ನು ವ್ಯಕ್ತಗೊಳಿಸುತ್ತಿದ್ದವು. ಆದರೆ ಈಗ ಬಂದಿದ್ದ ತನ್ನ ಭಕ್ತನನ್ನು ಕಂಡು, ಅವನ ಮನದುಮ್ಮಳವನರಿತು ಶಾಂತಸ್ವರೂಪಿಣಿಯಾಗಿ, ಅವನ ಶಿರದ ಮೇಲೆ ಕೈಯಿಡಲು, ಆಕ್ಷಣವೇ ಸವಾರನು ಕೂತ ಸ್ಥಳದಿಂದಲೆ ಹಾಗೆಯೇ ತಳಮನೆಗೆ ಇಳಿದನು. ಆ ವೇಳೆಗೆ ಕಣ್ತೆರೆಯಲು, ಮೌನಮುದ್ರೆಯಲ್ಲಿ ಸಿದ್ಧಾಸನಸ್ಥನಾದ ಒಬ್ಬ ಯೋಗಿಯನ್ನು ತನ್ನೆದುರಿಗೆ ಕಂಡನು; ಶಿರಬಾಗಿಸಿದನು. ತನ್ನ ಕುಲದೇವತೆಯ ಪ್ರೇರಣೆಯಿಂದ ಬಾಯಿಂದ ಮಾತುಗಳು ತಾವೇ ಹೊರಬೀಳಹತ್ತಿದವು. 'ಗುರುವರ್ಯ, ಪ್ರಸನ್ನನಾಗು, ನಾನೊಬ್ಬ ಪಾಮರನು, ನಿನ್ನ ದರ್ಶನಾರ್ಥವಾಗಿ ಅನೇಕ ಹಗಲು ರಾತ್ರಿಗಳ ವರೆಗೆ ಸಂಚರಿಸಿ ಬಂದಿದ್ದೇನೆ. ನನ್ನ ಮನದಿಚ್ಛೆಯನ್ನು ಪೂರ್ತಿಗೊಳಿಸು. ನನ್ನ ಮುಂದಿನ ಕಾರ್ಯದಲ್ಲಿ ಸಹಾಯ ಮಾಡು, ದಾರಿಯನ್ನು ತೋರಿಸು. ನಿನ್ಹೊರತೆನಗಾರು ಗತಿ! ನನ್ನ ಪರಿವಾರದ ಸ್ಥಿತಿಗತಿಯನ್ನು ನೀನು ಬಲ್ಲೆ. ನಾನು ನಿನ್ನಲ್ಲಿಗೆ ಬಂದದ್ದು ಆ ಪರಿವಾರದ ದೆಶೆಯಿಂದ. ಇಹಸುಖವನ್ನಾದರೂ ಪೂರ್ತಿಯಾಗಿ ಅನುಭವಿ

ಸುವಂತೆ ಮಾರ್ಗ ತೋರಿಸು. ಇಲ್ಲವಾದರೆ ಇವತ್ತಿಗೆ ನನ್ನ ಕಡೆಯ ದಿವಸ. ನನ್ನ ಕಡೆಯ ದಿವಸವೇ ನನ್ನ ಪರಿವಾರದ ಕಡೆಯ ದಿವಸ. ತಡಮಾಡಬೇಡ' ಎಂದು ಕಠಾರಿಯನ್ನು ಹಿರಿದು ತಲೆ ಬಾಗಿಸಿ ಎತ್ತಿ ಹಿಡಿಯಲು ಆ ಯೋಗಿಯು ಅವನ ಕೈಯನ್ನು ಹಿಡಿದು:—

'ತಡೆ ತಡೆ! ಅವಸರ ಮಾಡಬೇಡ, ಇಂದಿಗೆ ನಿನ್ನ ದಿವಸಗಳು ಮುಗಿದಿಲ್ಲ. ನಿನ್ನ ಮನವನ್ನೆಲ್ಲ ನಾನರಿತೆಹನು. ಇಗೋ! ಈ ಮೂರು ರುದ್ರಾಕ್ಷಿಗಳನ್ನು ತೆಗೆದುಕೋ!! ಬಳ್ಳೇ ಜಾಗರೂಕತೆಯಿಂದ ಅವುಗಳನ್ನು ಕಾಪಾಡು. ನಿನಗೇನಾದರೂ ಎಡರುಗಳು ಬಂದರೆ ಅವುಗಳು ನಿನಗೆ ಸಹಾಯ ಮಾಡುವವು' ಎಂದು ಹೇಳಿ ತನ್ನ ಕೃಷ್ಣಾಜಿನದ ಸುರಳಿಯನ್ನೆತ್ತಿ ಭೂಮಿಗೆ ಬಡಿಯಲು ಒಂದು ದಿವ್ಯವಾದ ಕುದುರೆಯು ತಕ್ಷಣವೇ ಬಂದು ನಿಂತಿತು. ಅದರ ಶುಭ್ರವರ್ಣವು ಜಗತನ್ನು ಮೋಹಿಸುವಂತಿತ್ತು. ಅದೊಂದು ಅಸುರರ ಕುದುರೆ. ಮೂರು ಲೋಕಗಳಲ್ಲಿಯೂ ಸಂಚರಿಸಲು ಅದಕ್ಕೆ ಸಹಜವಾಗಿತ್ತು. ಯೋಗಿಯು ಆ ಕುದುರೆಯ ಕಡೆಗೆ ಬೊಟ್ಟು ಮಾಡಿ ತೋರಿಸಿ "ಇಕೋ! ಈ ಕುದುರೆಯನ್ನೇರಿ ಇಲ್ಲಿಂದ ಉತ್ತರಕ್ಕಿರುವ ಮಹಾಗೆಂಧ್ವರಕ್ಕೆ ಹೋಗು. ಅಲ್ಲಿ ಒಂದು ನಾಯಿ ಇರುವದು. ಅದಕ್ಕೆ ಹೆದರದೆ ಅದರ ಬಾಲವನ್ನು ಒಂದೇ ಹೊಡತದಿಂದ ಕಡೆದುಬಿಡು, ಅಂದರೆ ನಿನ್ನ ಮುಂದಿನ ಕಾರ್ಯವೆಲ್ಲ ಸಫಲವಾಗುವವು. ನಿನ್ನ ಕೈಮೀರಿದ ಪ್ರಸಂಗಗಳಲ್ಲಿ ಈ ಕುದುರೆಯು ನಿನಗೆ ಸಹಾಯಮಾಡುವದೆಂದು ಏನೋ ಸವಾರನ ಕಿವಿಯಲ್ಲಿ ಸೂಚಿಸಿ, ಮುನಿಯು ಅದೃಶ್ಯನಾದನು. ಆಮೇಲೆ ಸವಾರನು ಮುನಿಗೆ ಮನಸ್ಸಿನಲ್ಲಿ ವಂದಿಸಿ, ಕುಲದೇವತೆಯನ್ನು ಸ್ಮರಿಸಿ, ಆ ದಿವ್ಯ ಕುದುರೆಯನ್ನೊಮ್ಮೆ ಥಪ್ಪರಿಸಿ, ಅದರ ಕಿವಿಯಲ್ಲಿ ಏನೋ ಗುಣಗುಟ್ಟಿ, ಥಟ್ಟನೆ ಹಾರಿ ಅದರ ಮೇಲೆ ಕುಳಿತು ಲಗಾಮು ಹಿಡಿದೆಳೆಯಲು, ಕೂಡಲೆ ಅದು ಬರ್‍ರನೆ ಹಾರಿ ದೇವಾಲಯದ ಹೊರಗೆ ಬಂದು ನಿಂತಿತು. ಅದೇ ವೇಳೆಗೆ ಸವಾರನ ಮೊದಲನೆಯ ಕುದುರೆಯು ಬಂದಿತು. "ತಾನು ಬರುವ ವರೆಗೆ ಮೊದಲನೆಯ ಪ್ರಾಕಾರದಲ್ಲಿರು" ಎಂದು ಅದಕ್ಕೆ ಹೇಳಿ, ತಾನು ತನ್ನ ಪ್ರಯಾಣವನ್ನು ಗಗನಮಾರ್ಗವಾಗಿ ಬೆಳೆಯಿಸಬೇಕೆನ್ನುವಷ್ಟರಲ್ಲಿ ಸೂರ್ಯೋದಯವಾಯಿತು.

---

೩

ಈಗ ತಾನೇ ಸೂರ್ಯೋದಯವಾಗಿದೆ. ಹೊಂಬಿಸಿಲಿನ ಛಾಯೆಯಿಂದ ಭೂಮಿ ಎಲ್ಲ ಸುವರ್ಣಮಯವಾದಂತೆ ತೋರುತ್ತಿದೆ. ಕೆಲವು ಹಕ್ಕಿ ಪಕ್ಕಿಗಳು ಆನಂದದಿಂದ ಉಲಿಯುತ್ತ ಉತ್ಸಾಹದಲ್ಲಿವೆ. ರಾತ್ರಿಯಲ್ಲಿ ಗಂಟಲ ಹಿಚುಕಲು ಯತ್ನಿಸುತ್ತಿದ್ದ ವೈರಿಗಳ ಕೈಯೊಳಗಿಂದ ಪಾರುಮಾಡಿದುದಕ್ಕಾಗಿ ಸೂರ್ಯನಾರಾಯಣನನ್ನು ಹಾಡಿ ಹಾಡಿ ಹರಸುತ್ತಿವೆ. ಪರರ ಮೇಲೆಯೇ ಅವಲಂಬಿಸಿ ಜೀವಿಸುತ್ತಿದ್ದು, ಪರರ ಮೇಲೆಯೇ ತಿರುಗಿ ಬೀಳಲೆತ್ನಿಸುತ್ತಿದ್ದ ಗೂಗೆ ಮೊದಲಾದ ಕೃತಘ್ನ ಪ್ರಾಣಿಗಳು ತಮ್ಮ ಕಾರ್ಯಕ್ಕೆ ವಿಘ್ನವನ್ನುಂಟು ಮಾಡಿದುದಕ್ಕಾಗಿ ಅದೇ ಸೂರ್ಯನನ್ನು ಶಪಿಸುತ್ತಿದ್ದವು. ಈ ಸಮಯದಲ್ಲಿ ಕಲ್ಲ, ಬಸಪ್ಪ, ನಿಂಗಣ್ಣ ಮೊದಲಾದವರು, ತಮ್ಮ ಗುಡಿಸಲಿನ ಮುಂದೆ ಉರಿ ಕಾಯಿಸಿಕೊಳ್ಳುತ್ತ ದುಂಡಗೆ ಕುಳಿತಿದ್ದರು. ತಮ್ಮಜ್ಜನು ಒಮ್ಮೆಲೇ ಮಾಯವಾದುದಕ್ಕೆ ತಮ್ಮ ದುಃಖವನ್ನು ವ್ಯಕ್ತಪಡಿಸಿ, ಆತನ ವಿಚಾರವಾಗಿಯೇ ಮಾತಾಡುತ್ತಿದ್ದರು.

ಬಸ್ಯಾ:—ಯಜ್ಜ ಎತ್ತಾಗ ಹೋಗಿರಬೇಕು ? ಒಳ್ಳೇ ಮೋಜಾಪಾ, ಹೀಂಗ ಮಾತಾಡಿಕೋತ ಕೂತಾನ, ಎಲಿ ಅಡಿಕಿ ಉಗಳ್ಯಾನ ಮತ್ತ, ಊಟ ರಾಗ ಮಟಾಮಾಯ ಆದ ನೋಡ ಹ್ಯಾಂಗ ಹೋಗಿದ್ದಾನಪಾ ?

ನಿಂಗ್ಯಾ:— ನೀ ಕೇಳಿಲ್ಲೇನು, ಈಗ ಅಲ್ಲಲ್ಲಿ ಗಾಳಿದೆವ್ವ ಆಡ್ಯಾಡ ತಾವಂತ, ಕೂತಿರಲಾಕ ದಪ್ಪನ ಮನಿಸ್ಯಾನ ಎತ್ತಿಗೊಂಡು ಹೋಗಿ ದೂರ ಬಿಡತಾವಂತಪಾ, ಮೊನ್ನೆ ನಮ್ಮ ಮಾವನ ಮಗನ್ನ ಒಯ್ದು ಕ್ಯಾಸ ಹಳ್ಳದಾಗ ಚಲ್ಲಿತ್ತಂತ, ಹಿಂದಾಗಡನೇಕ ಹೋಗಿ ತೊಗೊಂಡ ಬಂದರಂತ, ಇಂತಾ ಬಿರಕಿ ಅದಾವ ದೆವ್ವ.

ಕಲ್ಲ:—ನಿಮ್ಮಾವನ ಮಗ ದೆವ್ವಗ ಬೇದಿದ್ದನಂತ, ಅದಕ್ಕ ಬಿಟ್ಟಾವ! ಮೊದಲ ದೆವ್ವ ನಮ್ಮಜ್ಜೇನು ಬೇದಿಲ್ಲ ಬಿಟ್ಟಿಲ್ಲ. ಯಾವುದೋ ಒಬ್ಬ ಶೂರ ಸವಾರನ ಕತೆ ಹೇಳತಿದ್ದ, ಆ—ಎನ್ನೋದರೊಳಗ—ಕಣ್ಮಟ್ಯಾತ ನೋಡ, ಇದು ಬ್ಯಾರೇ ಏನೋ ಇರಬೇಕು!

ಬ:— ಬ್ಯಾರೇ ಏನಿದ್ದೀತ ಬಿಡೋ! ದೆವ್ವನ— ಇರಲಿಕ್ಕೇ

ಬೇಕು. ಇಲ್ಲೀರ, ಯಾರೋ ಮಾಟ ಮಂತ್ರ ಮಾಡಿಸ್ಯಾರ ನೋಡ ಹಾಂಗಾರ!

ಕ:— ನಿನಗ ಮಾಟದ ಹುಚ್ಚು ಹಿಡಿದೈತಿ. ಮುದುಕರಿಗೆ ಮಾಟ ಮಾಡಸ್ತಾರೇನು ಲೋಕದಾಗೆಲ್ಲಾರ ಕೇಳೀಯಾ? ಬಾಳಮಾಡಿ ಅವ ಆ ಕುದುರೆ ಬೆನ್ನತ್ತಿ ಹೋಗಿರಾಕಬೇಕು. ನಾವೂ ಹೋಗೋಣಂತಿದ್ವಿ. ಆ ಗುಡ್ಡದಾಗ ಕಲ್ಲ ಬಾಳ ಅದಾವಂತ.

ಬ:— ಹೌದು! ನೋಡಲೆ ನಿಂಗ್ಯಾ! ಮೊನ್ನೆ ಎಜ್ಜ ನಮಗೆ ಲ್ಲಾರಿಗೂ ಕಲ್ಲಿನ ಮನಿ ಕಟ್ಟಿಸಿಕೊಡತೇನಂತ ಹೇಳಿದ್ದಲ್ಲ? ಅದಕ್ಕ ಕಲ್ಲ ತರಾಕ–ಹೋಗ್ಯಾನ ನೋಡ! ಬೆರಕಿ ಎಜ್ಜ. ನಮ್ಮನ್ನೆಲ್ಲಿ ಕರಕೊಂಡು ಹೋಗಬೇಕಾಗತೈತಿ ಅಂತ ತಾನೊಬ್ಬವನ, ಮಾಟಾ ಮಾಡಿ ಹೋಗ್ಯಾನ. ಹೌದಲ ಕಲ್ಲಾ! ಎಜ್ಜ ಬಹಳ ಬೆರಕಿ ನೋಡ ಹಂಗಾರ!

(ಹಿಂದಿನಿಂದ ಮಲ್ಲನು ಕಣ್ಣೊರಿಸಿಕೊಳ್ಳುತ್ತ ಬರುವನು—)

'ಛೀ ಏಳ್ರೋ ನಿಮ್ಮಂಜಾಳ ಹೋಗಲಿ!'

ಎಲ್ಲರು— ಏನಪಾ ಮಲ್ಲ, ಈಗೆದ್ದೇನು?

ಕಲ್ಲ:—ಎಮ್ಮಿ ಒದರೇ ಒದರತೈತಿ–ಇವ ಹಂಗ–ಕಂಬಳಿ ಮುಸಕಿ ನ್ಯಾಗ ಬಿದ್ದಾನ. ಛೀ! ಏಳೋ ಎಂದ ಬಾಳೇವ ಮಾಡಿ ನೀ ಎಲ್ಯಾರ?

ಮಲ್ಲ:—ನಸಕಿನ್ಯಾಗೆದ್ದಕ್ಯಾಸ ಎತ್ತಿಗೆ ಒಂದ ಹಿಡಿ ಮೇವು ಒಗದು ಹೀಂಗ ಅಡ್ಡಾಗಿದ್ದೆ–ಮತ್ತ ನಿದ್ದೀನ ಹತ್ತಿಬಿಟ್ಟಿತು. ಕನಸಿನ್ಯಾಗ ಎಜ್ಜ ಬಂದಿದ್ದ.

ಬ:— ಕನಸನ್ಯಾಗ? ಹ್ಯಾಂಗ ಕರಾಽಽಗ ಇದ್ದನ ಹೌದಲ್ಲೋ?

ಕ:— ನೀ ಎಲ್ಲೋ ಈಶ್ವರ ಮುಂದಿನ ಬಸವಣ್ಣಾ ಕಾಣತೀದಿ, ಕನಸನ್ಯಾಗೊಂದು ನುನಸನ್ಯಾಗೊಂದಾಗತಾರೇನು? ನೀ ಒಳೇ ಕೇಳತಿ?

ಮಲ್ಲ:— ಕರೇಪಂದ್ರ ನಮ್ಮ ಎಜ್ಜ ಬಂದಿದ್ದ, ನಮ್ಮೆಲ್ಲರಿಗೂ ಒಂದು ಮಾತ ಹೇಳ್ಯಾನ.

ಎಲ್ಲರೂ:— ಏನ ಹೇಳ್ಯಾನ? ಎಲ್ಲಿದ್ದಾನಂತ?

ಮ:— ದೂರ! ಏಳುಕೋಟಿ ಕೊತ್ತಳದಾಟ, ಕಾಳಿಕಾದೇವಿ ಗುಡಿಯೊಳಗ ಹೋಗಿದ್ದನಂತ, ಅಲ್ಲಿಂದ ಮುಂದೆ ಕುದುರೆ ಸವಾರನ

ಸಂಗಾತ ಹೋಗಿದಾನಂತ ಜಾತ್ರಿ ನೋಡಾಕ. ನಮಗೆಲ್ಲಾ ಬೆಂಡು ಬೆತ್ತಾಸ ತರತಾನಂತ, ಗಾಬರಿಯಾಗಬೇಡ್ರಿ ಅಂತ ಹೇಳ್ಯಾನ. ಮುಂದಿನ ಸೆಂತಿ ಬರೋದರೊಳಗ-ಬರತಾನಂತ.

ಕ:— ಹೂಃ ಬರೋತನಕ ಏನ ಮಾಡಬೇಕಂತ? ಸೆಂತಿ ಎಚ್ಚಕ್ಕ ರೊಕ್ಕಿಲ್ಲ. ಹುಡುಗರ ಅಳತಾವು. ಎಲಡಕಿ ತರಾಕ ಬಿಲ್ಲಿ ಇಲ್ಲ. ಜ್ವಾಳಾರ ಅದಾವಂದ್ಯಾ? ಬಂದಷ್ಟ ಕಾಳ ಬ್ಯಾಡರು ಬಡಕೊಂಡ ಹೋಗ್ಯಾರ. ಎಜ್ಜಗೇನ ನಮ್ಮ ಸುಖದುಃಖ ಗೊತ್ತು? ತಾ ಒಬ್ಬವ ಹೊರಟ, ತೀರಿತು ಕುದರಿ ಸವಾರನ ಬೆನ್ನ ಹತ್ತಿ. ಜಾತ್ರಿ ನೋಡಾಕಂತ, ಜಾತ್ರಿ; ಮುದು ಕಾದರೂ ಇನ್ನೂ ಹುಚ್ಚು ಬಿಟ್ಟಿಲ್ಲ. ಬೆಂಡುಬೆತ್ತಾಸ ಎಲ್ಲೀದ ತರತಾನೋ? ಒಂದೀಟ ತಂದರ ಯಾರ ಮೂಗ್ಗೆ ಸಾಲತಾವ? ನಮ್ಮ ಹಣೇಬರಹ ಹಿಂಗನೋ ಕಷ್ಟತನಕ! ಬೆಂಡಿಲ್ಲ, ಬೆತ್ತಾಸಿಲ್ಲ, ಎಲ್ಲ ಸುಳ್ಳ ನೋಡ; ಕೈಯಾಗ ರೊಟ್ಟಿ ಬಂದಾಗ ಎಲ್ಲಾ ಕರೇವ!

ಬ.– ನಿಂಗ್ಯಾ:— ಹೌದಂದೇವ ಕಲ್ಲ. ನಿನ್ನಟ ಬುದ್ಧಿ ನಮಗಿದ್ರ– ಎಜ್ಜನಾಟ ತೋರಸತಿದ್ದೀವಿ. ಬಂದನಕಾ ಬರ್ಲಿ ನೋಡೋಣ.

ಮಲ್ಲ:— ಅಲ್ರೋ ಬರೇ ಬೆಂಡು ಬೆತ್ತಾಸಲ್ಲ. ಬಂ– (ಕಿವಿಯಲ್ಲಿ ಏನೇನೋ ಹೇಳುತ್ತಾನೆ.

ಕಲ್ಲ:— ಆಹಾ! ಹಾ, ಹಾ– ಇನ್ನೇನು ಗುಡಿಸಲ ಹಾರೇ ಹೋಗತೈತಿ, ಕಲ್ಲು ಗಚ್ಚಿನ ಬಂಗ್ಲೆ ಆಗೋದೇನ ಇನ್ನ? ತಿನ್ನಾಕ ಕೂಳ ಸಿಕ್ಕರ ಸಾಕು. ಇವ ಹೊಂಟಾನ ಎತ್ತಾಗೋ? ಎಲ್ಲಾ ಗೊತ್ತದ ಬಿಡೋ? ಸಣ್ಣಾಗಿ ನಮ್ಮ ಮಾರಿಗೆ ಮಂಕ ಹಚ್ಚಿ ಹೋಗ್ಯಾನ. ಹಿಂದ ಗಡಸೇಕ ಕೊಡತಾನಂದೇನ? ನೋಡ್ಯಾರ ನೋಡ– ಏಟಾಗತೈತಿ ಗದ್ದಲಾಟ! ಇಂತವರ ಬಾಹಳ ಮಂದಿ ಆಗಿ ಹೋಗ್ಯಾರೋ ಮಲ್ಲ.

ಮಲ್ಲ:— ಹೋಗಲಿ ಬಿಡು! ಏಳೇಳ್ರಿ! ಎತ್ತ ಹೊರಗ ಬಿಡೋಣ! ರೊಟ್ಟಿ ಬುತ್ತಿ ಕಟ್ಟಸೇಳ್ರೋ! ಹೊತ್ತೇರೇತಿ ರಂಟಿ, ಹೊಡ್ಯಾಕ ಹೋಗಬೇಕ. (ಹೀಗೆಂದು ಗುಡಿಸಲದ ಕಡೆಗೆ ಮೋರೆ ಮಾಡಿ) 'ಏ ಕರ್ಯಾ! ರೊಟ್ಟಿ ಆಗ್ಯಾವೇನ ಕೇಳ?, (ಒಳಗಿನಿಂದ) ಕರ್ಯಾ– 'ರೊಟ್ಟಿಗೆ ಹಿಟ್ಟ

ಲ್ಲಂತ; ಊರಾಗ ಕಡಾ ಯಾರೂ ಕೊಡವಲ್ಲರು. ಇವತ್ತ ಸೆಂತ್ಯಾಗ ತರ ಬೇಕಂತ."

ಮ:— ಬಸ್ಯಾ! ನಿಂಗ್ಯಾ! ಏಳ್ರೋ– ಇವತ್ತ ಸಂತ್ಯಾಗ ಹೋಕ್ಯಾಸ ಎತ್ತ ಮಾರಿ ಜ್ವಾಳ, ಮೆಣಶಿನಕಾಯಿ ತರೋಣ ನಡ್ರೋ! ನಾಳೆ ಗಳೇಕ ಹೋದರಾಯಿತು. ಶಾಂಭೋಗರ ಎತ್ತು ಇಸಗೊಂಡ ಈ ವರ್ಸ ನಾಗಿಸಿದರಾಯಿತು.

ಕಲ್ಲ:— ಒಂದೆತ್ತ ಮಾರಾಕ ಕೊಡು, ಮತ್ತೊಂದೆತ್ತ ಬ್ಯಾಡರು ಬಡಕೊಂಡ ಹೋಗತಾರು, ಕುಂತ್ರೀ ಅಂತ– ಎಜ್ಜ ಇದ್ರ ಅವನ್ಯಾರ ಪ್ಯಾಟ್ಯಾಗ ಕುಂಡಿರ್ಸಿ ದುಡ್ಡ ಬೇಡಾಕ ಬರತಿತ್ತ.

(ಮುಗುಳ್ನಗೆ ನಗುತ್ತ ಎಲ್ಲರೂ ಒಳಗೆ ಹೋಗುವರು.)

ಸೂರ್ಯನು ಮೇಲಕ್ಕೇರುವಂತೆ ಏರುತ್ತಿದ್ದಾನೆ. ಬಿಸಲಿನ ತಾಪವು ಹೆಚ್ಚಾಗುತ್ತಿದೆ. ಆಲದ ಮರವು ಹಾಗೆಯೆ ನಿಂತಿದೆ. ಎಲ್ಲಿ ನೋಡಿದರೂ ಮೃಗಜಲವೇ ಜಲವು! ಇಲ್ಲಿದ್ದುದು ಇಲ್ಲಿಲ್ಲ. ಒಂದೇ ಸವನೆ ಓಡುತ್ತಿದೆ. ಯಾರ ಕೈಗೂ ಸಿಕ್ಕಲಾರದು, ಗುಡಿಸಲುಗಳನ್ನು ಒಂದೇ ನಿಮಿಷದಲ್ಲಿ ಸುಟ್ಟು ಭಸ್ಮ ಮಾಡುವ ಜ್ವಾಲಾಗ್ನಿಯ ಹದನವಾದ ನಾಲಗೆಗಳಂತೆ ಬಿಸಿಲಿನಿಂದುಂಟಾದ ಮೃಗಜಲವು ಕಣ್ಣುಕುಕ್ಕುತ್ತಿದೆ. ಇದೊಂದು ವಿಚಿತ್ರ ಲೀಲೆ. ಕಣ್ಣಿಗೆ ಕಾಣುವದೊಂದು, ಉಣ್ಣುವದೊಂದು. ಕಣ್ಣಿಗೆ ಕಂಡದ್ದು ಕೈಯೊಳಗಿಲ್ಲ. ಕೈಯೊಳಗಿದ್ದದು ಬಾಯೊಳಗಿಲ್ಲ. ಕನಸಿನಲ್ಲಿ ಕಂಡ ಕನಕದಂತೆ ಜಗವು ನಡೆಯುತ್ತಿದೆ. ನಡೆಯುತ್ತ ಬಂದಿದೆ; ಮುಂದೆ ಯಾದರೂ ಹಾಗೆಯೇ ನಡೆಯುವದು. ಇದಕ್ಕೆ ಸೂರ್ಯನೇ ಸಾಕ್ಷಿ.

---

೪

ಇತ್ತ ಸವಾರನು ಬಹಳ ಉತ್ಸಾಹದಿಂದ ಪ್ರಯಾಣ ಬೆಳೆಸಿದನು. ಉತ್ತರದ ಕಡೆಗೆ ಕುದುರೆಯ ಮೋರೆ ತಿರುವಿ ಅದರ ಕಿವಿಯನ್ನು ಹಿಡಿದೆಳೆಯಲು, ಮನೋವೇಗದಿಂದ ಗಾಳಿಪಥದಲ್ಲಿ ಸರ್ರೆಂದು ಓಡತೊಡಗಿತು. ಭೂಪ್ರದೇಶವೆಲ್ಲ ಹುಚ್ಚೆದ್ದ ನಾಯಕರಂತೆ ಒಂದೇಸವನೆ ಹಿಂದಕ್ಕೆ ಓಡು

ತ್ತಿತ್ತು. ದೇಶ ಪಟ್ಟಣಗಳೆಲ್ಲ ನಿಮಿಷಮಾತ್ರಕ್ಕೆ ಕಂಡು ಕಾಣದಂತಾಗು ತ್ತಿದ್ದವು. ಯಾವದೂ ಸ್ಥಿರವಾಗಿದ್ದಂತೆ ಕಾಣಲೊಲ್ಲದು. ಗುಡ್ಡ ಬಂತು, ಊರು ಬಂತು ಎನ್ನುವಷ್ಟರಲ್ಲಿ ಎಲ್ಲವೂ ಮಾಯವಾಗಿ ಹೋಗುತ್ತಿದ್ದವು. ತಲೆಯೊಡೆಯುವಂತಹ ಬಿಸಿಲು ಮೇಲೆ ಹೊಡೆಯುತ್ತಿದೆ. ಭೂಪ್ರದೇಶ ವೆಲ್ಲ ಮೃಗಜಲ ಜಾಲದಲ್ಲಿ ಮುಸುಕಿಕೊಂಡಿದೆ. ಪ್ರಖರವಾದ ಸೂರ್ಯನ ತಾಪದಿಂದ ಜಗವೆಲ್ಲ ಮಂಜಿನ ಸಂಜೆಿನಲ್ಲಿ ಮುಳುಗಿದೆಯೋ ಎಂಬಂತೆ ಅಸ್ಪಷ್ಟವಾಗಿ ಕಾಣುತ್ತಿತ್ತು. ಮಧ್ಯಾಹ್ನ ಬಿಸಲಿನಿಂದಲೂ, ಬಹು ದೂರ ಪ್ರಯಾಣ ಮಾಡಿದ ಶ್ರಮದಿಂದಲೂ ಸವಾರನ ಬಾಯಾರಿತು. ಕುದು ರೆಯೂ ಬೆವರುಗೊಂಡಿತು. ಇನ್ನು ಎಲ್ಲಿಯಾದರೂ ತಂಪಾದ ಸ್ಥಾನದಲ್ಲಿ ಇಳಿದು, ಯಥೇಷ್ಟ ನೀರು ಕುಡಿದು, ಪರಿಶ್ರಮವನ್ನು. ಪರಿಹರಿಸಿ ಕೊಂಡು ಮುಂದೆ ಸಾಗಬೇಕೆಂದು ಯೋಚಿಸಿ, ನೀರಿನ ಸಂಚಯಕ್ಕಾಗಿ ಅತ್ತಿತ್ತ ನೋಡಹತ್ತಿದನು. ಎಲ್ಲಿಯೂ ಕಾಣಿಸಲಿಲ್ಲ. ದೂರದಲ್ಲಿ ಕಂಡಂತಾಗಬೇಕು. ಅಲ್ಲಿ ಏನೂ ಇರಲಿಕ್ಕಿಲ್ಲ. ಹೀಗಾಗಿ ಬಹಳ ತಾಪ ಗೊಂಡು ಮನದೊಳಗೆ ಚಿಂತಿಸತೊಡಗಿದನು. ಅಷ್ಟರೊಳಗೆ ಅವನ ಕುದುರೆಯು ಭೂಮಿಗೆ ಥಟ್ಟನೆ ಇಳಿದು ನಿಂತುಬಿಟ್ಟಿತು. ಬಹು ವೇಗದಿಂದ ಸಾಗಿ ಬಂದ ಕುದುರೆಯು ಒಂದೇ ಪೆಟ್ಟಿಗೆ ನಿಲ್ಲಲು ಸವಾರನು ಮುಕ್ಕರಿಸಿ ಕೆಳಗೆ ಧೊಪ್ಪನೆ ಬಿದ್ದನು. ಗಂಟಲೊಣಗಿ ಬಾಯಾರಿದ್ದರಿಂದ ಮಾತಾಡ ಲಿಕ್ಕೆ ಬರಲೊಲ್ಲದು. ನೀರಿನ ದಾಹವೊತ್ತಟ್ಟಿಗೆ, ಮೇಲೆ ಮೈನುಗ್ಗಾದ ದ್ದೊಂದು, ಹೀಗಾಗಿ ಸವಾರನ ಮನಸ್ಸಿಗೆ ಬಹಳೇ ತ್ರಾಸವಾಯಿತು. ಕೆಲವು ಹೊತ್ತಿನ ಮೇಲೆ ಸವಾರನ ಕಿವಿಯಲ್ಲಿ ಗುಳುಗುಳು ಎಂಬ ಶಬ್ದವು ಕೇಳಬಂತು. ಸವಾರನು ಮುಖವೆತ್ತಿ ಸುತ್ತಲೂ ನೋಡಿದನು. ಆಹಾ ! ಎದುರಿನಲ್ಲಿಯೇ ಒಂದು ವಿಶಾಲವಾದ ಹೊಳೆಯು ತುಂಬಿ ಹರೆಯುತ್ತಿತ್ತು. ಅದನ್ನು ಕಂಡು ಮನದಲ್ಲಿ ಹಿಗ್ಗಿದನು. ತೃಷ್ಣೆಯು ಅರ್ಧ ಕಡಿಮೆ ಯಾಯಿತು. ನಿದ್ದೆ ಬಂದವನಿಗೆ ಹಾಸಿಗೆ ದೊರಕಿದ ಹಾಗೆ, ನೀರಡಿಕೆ ಯಾದವನಿಗೆ ಗಂಗಾಜಲವು ಪ್ರಾಪ್ತವಾದಂತೆ, ಸವಾರನಿಗೆ ತುಂಬಾ ಆನಂದ ವುಂಟಾಯಿತು. ದೇವರು ದೊಡ್ಡವನೆಂಬ ಭಾವನೆಯು ಮನದೊಳಗೆ ದೃಢವಾಗಿ ನೆಲೆಗೊಂಡಿತು. ಆದಿಶಕ್ತಿಯನು, ಸ್ಮರಿಸತೊಡಗಿದನು.

ಸಕಲ ಪ್ರಾಣಿಗಳಿಗೆ ಅವಶ್ಯವಾದ ವಸ್ತುಗಳನ್ನು ದೇವರು ಜಗತ್ತಿನ ತುಂಬ ನಿರ್ಮಿಸಿದ್ದಾನೆ. ಪ್ರಾಣಿಗಳನ್ನು ಹುಟ್ಟಿಸುವದಕ್ಕಿಂತ ಅವುಗಳಿಗೆ ಬೇಕಾಗುವ ವಸ್ತುಗಳನ್ನು ಜಗತ್ತಿನಲ್ಲಿ ಮೊದಲು ಹುಟ್ಟಿಸಿದನು. ಅವುಗಳನ್ನು ಉಪಯೋಗಿಸುವ ಅಧಿಕಾರವು ಪ್ರಾಣಿಗಳಿಗೇ ಇರಬೇಕೆಂದು ಕಟ್ಟಳೆ ಮಾಡಿದನು. ಈ ರೀತಿಯಾಗಿ ದೇವರ ಸೃಷ್ಟಿಮಹಿಮೆಯನ್ನು ಪರಿಪರಿಯಿಂದ ಕೊಂಡಾಡಿ, ಇನ್ನು ನೀರು ಕುಡಿದು ನೀರಿನ ದಾಹವನ್ನು ಪರಿಹರಿಸಿಕೊಳ್ಳಬೇಕೆಂದು ಎದ್ದು, ದಂಡೆಗೆ ಬಂದು ನೀರು ತೆಗೆದುಕೊಳ್ಳುವದಕ್ಕೆ ಬೊಗಸೆಯನ್ನೊಡ್ಡಿದನು. ಆದರೆ ಒಂದು ವಿಚಿತ್ರ ಸಂಗತಿಯಾಯಿತು, “ದೇವರು ವರವ ಕೊಟ್ಟರೂ ಪೂಜಾರಿ ವರ ಕೊಡಲಿಲ್ಲ” ಎಂಬಂತೆ ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡು ಬಾಯಿಗೆ ಒಯ್ಯುವಷ್ಟರಲ್ಲಿ ಕೈಯೊಳಗಿನ ನೀರು ಮಾಯವಾಗುತ್ತಿದ್ದವು. ಕೈಯನ್ನು ನೀರಿನಲ್ಲಿ ಚೆನ್ನಾಗಿ ಎದ್ದಿ, ಒಳ್ಳೇ ಗಟ್ಟಿಯಾಗಿ ಎರಡೂ ಅಂಗೈಗಳನ್ನು ಅಂಜಲಿಯಾಕಾರವಾಗಿ ಹಿಡಿದು, ನೀರು ಕುಡಿಯುವಷ್ಟರೊಳಗೆ ಬರಿಗೈ, ಮತ್ತೆ ಎದ್ದುವನು ಮತ್ತೆ ಬರಿಗೈ, ಹೀಗೆ ಅನೇಕ ಸಲ ನೀರು ಕುಡಿಯಲು ಯತ್ನಿಸಿ, ಕಡೆಗ ನಿರಾಶಯನಾಗಿ, ನೀರಿಗೆ ಬಾಯಿ ಒಡ್ಡಬೇಕೆಂದು, ನೆಲಕ್ಕೆ ಹೊಟ್ಟೆ ಹಚ್ಚಿ, ತನ್ನ ಕೊರಳೊಳಗಿನ ರುದ್ರಾಕ್ಷಿಯನ್ನು ಕೈಯಿಂದ ಹಿಡಿದುಕೊಂಡು, ನೀರಿಗೆ ಬಾಯಿ ಹಾಕಲು ಯತ್ನಿಸತೊಡಗಿದನು. ನೀರು ತುಟಿಗೆ ತಗಲುವದೊಂದೇ ತಡ! ಬಾಯಿ ತುಂಬ ಬರೇ ಉಸುಕು. ಎಷ್ಟು ಪ್ರಯತ್ನಪಟ್ಟರೂ ನೀರನ್ನು ಕುಡಿಯಲು ಸಾಧ್ಯವಾಗಲಿಲ್ಲ. ಒಣಗಿದ ಗಂಟಲ. ಗಂಟಲದೊಳಗೆ ಮಳಲು. ಈ ಸ್ಥಿತಿಯಲ್ಲಿ ಸವಾರನು ಮನಸ್ತಾಪಗೊಂಡನು. ‘ಪ್ರತ್ಯಕ್ಷವಾಗಿ ಜಲಪ್ರವಾಹವು ಕಣ್ಣೆದುರಿಗೆ ಧಾರಾಳವಾಗಿ ಹರಿಯುತ್ತಿರಲು ಕುಡಿಯುವದಕ್ಕೆ ಒಂದು ಗುಟುಕು ನೀರು ಸಿಗಬಾರದೇ! ಅಥವಾ ನನ್ನ ಕಣ್ಣುಗಳೇ ಮೋಸ ಹೋಗಿದ್ದಾವೆಯೋ? ಮಳಲರಾಶಿಯೇ ಜಲರಾಶಿಯಾಗಿ ತೋರುತ್ತದೆಯೇ? ಇದೇನು ಮೃಗಜಲವೋ? ಮಾಯೆಯ ಮಾಟವೋ? ದೇವರಾಟವೋ? ಅಥವಾ ನನ್ನ ಪೂರ್ವಕರ್ಮದ ಲೀಲೆಯೋ? ತಿಳಿಯದು” ಎಂದು ಬಗೆಬಗೆಯಿಂದ ವಿಚಾರಿಸಿ, ದಾಹದಿಂದ ತೊಳಲಿ ಕಡೆಗೆ ಹೊಳೆಯಲ್ಲಿಯೇ ಧುಮುಕುವದಕ್ಕೆ

ಸಿದ್ಧನಾದನು. ಎಡಗಾಲನ್ನು ಮುಂದಿಟ್ಟು, ಬಲಗಾಲನ್ನು ಹಿಂದಕ್ಕೆ ಚಾಚಿ ಒಳ್ಳೇ ವೇಗದಿಂದ ನೀರಿನಲ್ಲಿ ಜಿಗಿಯಬೇಕೆನ್ನುವಷ್ಟರಲ್ಲಿ ಹಿಂದಿನಿಂದ ಯಾವದೋ ಒಂದು ವ್ಯಕ್ತಿಯು ಅವನ ಕೈ ಹಿಡಿದೆಳೆಯಿತು. ಸವಾರನು ತನ್ನ ಖಡ್ಗವನ್ನು ಹಿರಿದು ಹಿಂದಕ್ಕೆ ತಿರುಗಿ ನೋಡಿದನು. ಅಲ್ಲೇನಿದೆ? ಏನಿಲ್ಲ! ಖಡ್ಗವನ್ನು ಹಾಗೆಯೇ ಕೈಯೊಳಗೆ ಹಿಡಿದುಕೊಂಡು ಹಾರ ಬೇಕೆಂದುಪಕ್ರಮಿಸಿದನು. ಆದರೆ ತನ್ನ ಕೈಯೊಳಗಿನ ಖಡ್ಗವೇ ಅವನನ್ನು ಹಿಡಿದೆಳೆಯಿತು. ಸವಾರನು ಬಹಳೇ ಕೋಪಗೊಂಡನು.' ಈ ರೀತಿ ಪೀಡಿಸುವನಾವನು? ಎಲ್ಲಿಯೂ ಕಣ್ಗೋಚರನಾಗನು!" ಅತ್ತಿತ್ತ ನೋಡಿದನು. ನದಿಯ ದಂಡೆಗುಂಟ ಸಾಲಾಗಿ ಅನೇಕ ಪಶುಪಕ್ಷಿಗಳು ನೀರನ್ನು ಕುಡಿಯುವದಕ್ಕಾಗಿ ನೆರೆದಿದ್ದವು. ಅವುಗಳ ಗತಿಯೂ ಇವನ ಹಾಗೆಯೇ ಆಗಿತ್ತು. ಕುಡಿಯಲಿಕ್ಕೆ ನೀರು ಸಿಗಲೊಲ್ಲದು. ಧಾರಾಳವಾಗಿ ಹರಿಯುವ ಜಲವು ಅವುಗಳ ಪಾಲಿಗೆ ಮಳಲರಾಶಿಯೇ ಆಗಿತ್ತು. ಒಂದು ಗುಟುಕು ದೊರೆಯದಾಗಿತ್ತು. ಇದನ್ನು ಕಂಡು ಸವಾರನು ತಾಳಲಾರದೆ ಒಂದೇ ಕ್ಷಣದಲ್ಲಿ ತನ್ನ ಕೊರಳಲ್ಲಿದ್ದ ರುದ್ರಾಕ್ಷಿಯನ್ನು ತೆಗೆದು ಮುನಿಯನ್ನು ಸ್ಮರಿಸಿ ಹೊಳೆಯಲ್ಲಿ ಒಗೆದನು. ಮುನಿಯು ಮಂತ್ರಿಸಿ ಕೊಟ್ಟ ಆ ರುದ್ರಾಕ್ಷಿಯ ಸ್ಪರ್ಶಮಾತ್ರದಿಂದಲೇ ಒಂದೇ ಮಾರ್ಗವಾಗಿ ಹರಿಯುತ್ತಿದ್ದ ಅಪಾರವಾದ ಜಲಪ್ರವಾಹವು ದಂಡೆಗಳನ್ನು ಕೊರೆದು ಎಲ್ಲಾ ಕಡೆಗೂ ಧಾರೆಗಟ್ಟಿ ಹರಿಯತೊಡಗಿತು. ಸವಾರನ ಪಾದಗಳು ನೀರಿನಲ್ಲಿ ಮುಳುಗಿದವು. ಪಶುಪಕ್ಷಿಗಳು ಯಥೇಷ್ಟವಾಗಿ ನೀರನೀಂಟಿ ತಮ್ಮ ತೃಷೆಯನ್ನು ಹೋಗಲಾಡಿಸಿಕೊಂಡು, ಸವಾರನನ್ನು ಹರಸುವವೋ ಎಂಬಂತೆ ತಮ್ಮ ತಮ್ಮ ದನಿಯಲ್ಲಿ ಒದರುತ್ತ ನೀರಿನಲ್ಲಿ ಕ್ರೀಡಿಸಲಾರಂಭಿಸಿದವು. ಸವಾರನಾದರೂ ನೀರು ಕುಡಿದು, ಕುದುರೆಗೆ ಕುಡಿಸಿ, ಇನ್ನು ಮಾರ್ಗಕ್ರಮಣ ಮಾಡಲುದ್ಯುಕ್ತನಾದನು. ಅಷ್ಟರೊಳಗೆ ಹೊಳೆಯ ಮಧ್ಯದಲ್ಲಿ ಒಂದೇ ಸವನೆ ಉಗಿಯು ಏಳತೊಡಗಿತು. ಪ್ರಳಯಕಾಲದ ಕಾಲಪುರುಷನ ಉಸಿರೋ ಎಂಬಂತೆ ಉಗಿಯು ಆಕಾಶವನ್ನೇ ಮುಟ್ಟುವಂತಾಗಿತ್ತು. ಆ ಪಶುಪಕ್ಷಿಗಳು ಹೆದರಿ ಅಲ್ಲಿಯೇ ಸ್ತಬ್ಧವಾಗಿ ನಿಂತು ಬಿಟ್ಟವು. ಸವಾರನು ಆಶ್ಚರ್ಯಚಕಿತನಾದನು. ಇದೇನೋ ಬಂತೆಂದು

ಮತ್ತೊಂದು ರುದ್ರಾಕ್ಷಿಯನ್ನು ಬಿಚ್ಚಿ ಒಗೆಯಬೇಕೆನ್ನುವಷ್ಟರಲ್ಲಿ ಉಗಿಯೆಲ್ಲ ಅಡಗಿ ಒಂದು ವಿಚಿತ್ರ ಜಲಚರ ಪ್ರಾಣಿಯು ನೀರಿನಲ್ಲಿ ನಿಂತದ್ದು ಕಂಡುಬಂತು. ನೋಡುವದಕ್ಕೆ ಅರ್ಧ ಪಶು, ಅರ್ಧ ಮನುಷ್ಯರೂಪವಾಗಿತ್ತು. ಸವಾರನನ್ನು ಕಂಡು ವಿನಯದಿಂದ ಅವನಿಗೆ ತಲೆಬಾಗಿಸಿತು. ಸವಾರನು ಅದನ್ನು ಕಂಡು- 'ನೀನು ಯಾರು?' ಎಂದು ಪ್ರಶ್ನೆ ಮಾಡಿದನು.

"ಸ್ವಾಮೀ! ನಾನು ಈ ಹೊಳೆಯ ಪಾಲಕನು. ಈ ವರೆಗೆ ಸ್ವೇಚ್ಛೆಯಿಂದ ಇದರ ಫಲವನ್ನು ನನ್ನ ಕುಲದವರು, ನಾನು ಉಪಭೋಗಿಸುತ್ತಿದ್ದೆವು. ಆದರೆ ಇವತ್ತು ನೀವು ನಮ್ಮ ಹಕ್ಕನ್ನು ಸಂಪೂರ್ಣ ಕಿತ್ತಿ ಒಗೆದು ಸರ್ವ ಪ್ರಾಣಿಗಳಿಗೂ ಹಂಚಿಕೊಟ್ಟಿರಿ. ಇದು ನಮಗೆ ಮನಸ್ತಾಪವನ್ನುಂಟುಮಾಡುತ್ತದೆ. ಹೊಟ್ಟೆಯಲ್ಲಿ ಉರಿಬಿದ್ದಂತಾಗಿದೆ."

ಸವಾರನು:— 'ಹೊಟ್ಟೆಯಲ್ಲಿ ಉರಿಬಿದ್ದಂತಾಗಿದೆಯೋ? ಸುಟ್ಟುಕೊಂಡವನಂತೆ ಭಸ್ಮವಾಗು. ದೇವರು ಹರಿಯಬಿಟ್ಟ ಹೊಳೆಯನ್ನು ನೀನೊಬ್ಬನೇ ಉಪಯೋಗಿಸಲಿಕ್ಕೆ ನಾಚಿಕೆಬರಲಿಲ್ಲವೇ? ಅನೇಕ ಪ್ರಾಣಿಗಳು ನಿನ್ನ ಸಾಮೀಪ್ಯದಲ್ಲಿಯೇ ಗೋಳಿಡುತಿದ್ದುದನ್ನು ಕಂಡು ನಿನಗೆ ಕನಿಕರ ಹುಟ್ಟಲಿಲ್ಲವೇ? ಕಠೋರ! ಸೃಷ್ಟಿನಿಯಮಕ್ಕನುಸಾರವಾಗಿ ಹುಟ್ಟಿ ಬಂದ ವಸ್ತುವಿನ ಮೇಲೆ ನಿನ್ನದೇನು ಹಕ್ಕು? ಎಲ್ಲಿಂದ ಬಂತು? ನಿನ್ನ ಸಜಾತಿಯವರದೇನು ತಪ್ಪು? ದೇವರಿಗೂ ಕೂಡ ಮೋಸ ಮಾಡಿದಿಯಾ? ದೇವರಿಂದ ಬಂದ ನೀರು, ದೇವರಿಂದ ಬಂದ ಸಕಲ ಪ್ರಾಣಿಗಳಿಗೆ ಸಲ್ಲತಕ್ಕದ್ದು. ಅದರಲ್ಲಿ ಯಾರದೇನು ಅಧಿಕಾರ? ನೀನೇನು 'ಗೋವಿಾಜಿ ಕಾಪನೇ'? ಪಾಪ! ಮೂಕಪ್ರಾಣಿಗಳಿಗೆ ಇದೆಲ್ಲ ತಿಳಿಯುವದಿಲ್ಲ. ಅದಕ್ಕಂತಲೇ ಇಷ್ಟು ಹಾರಾಟ ನಿನ್ನದು. ಈಗ ನೋಡು ಹೇಗಾಯಿತು. ಸಕಲ ಪ್ರಾಣಿಗಳು ಸುಖವಾಗಿರಲಿ! ಇದಕ್ಕೆ ನೀನೇನಾದರೂ ಅಡ್ಡಿಮಾಡಿದರೆ ಇಗೋ, ಈ ರುದ್ರಾಕ್ಷಿಯಿಂದ ನಿನ್ನನ್ನೂ, ನಿನ್ನ ಸಕಲ ಕುಲವನ್ನೂ ಸಮೂಲ ನಾಶ ಮಾಡುವೆನು. ಎಚ್ಚರಿಕೆ!"

ಈ ಪ್ರಕಾರ ಹೊಳೆಯ ಪಾಲಕನಿಗೆ ಚೆನ್ನಾಗಿ ವಾಕ್ಪ್ರಹಾರಮಾಡಿ ತಾನು ಬಿಟ್ಟ ರುದ್ರಾಕ್ಷಿಯನ್ನು ಮತ್ತೆ ಕೊರಳಲ್ಲಿ ಕಟ್ಟಿಕೊಂಡನು. ಅಗ್ಗೆ ಕುದುರೆಯು ತನ್ನ ಖುರದಿಂದ ನೆಲ ಕೆದರುತ್ತಿತ್ತು. ಅದನ್ನು

ಕಂಡು ಸವಾರನು ಅದರ ಕಿವಿಯಲ್ಲಿ ಗುಸುಗುಟ್ಟಿದನು. ಆ ಕ್ಷಣವೇ ಕುದುರೆಯ ಹಣೆಯಿಂದ ಒಂದು ಹದನವಾದ ಬಾಣವು ಸರ್ರನೆ ಹೋಗಿ ಹೊಳೆಯ ಮಾಲಕನ ಶಿರದಲ್ಲಿ ಸಿಕ್ಕಿಕೊಂಡಿತು. ಎಷ್ಟು ಒದ್ದಾಡಿದರೂ ಬಾಣವು ಹೊರಗೆ ಬರಲೊಲ್ಲದು. ಮಾಲಕನು ಬಹಳೇ ದುಃಖಿತನಾಗಿ ತಾನು ಮಾಡಿದ ಪಾಪಕ್ಕೆ ಯೋಗ್ಯಪ್ರಾಯಶ್ಚಿತ್ತವೆಂದು ಬಗೆದು ತನಗೆ ದೊರೆತುದರಲ್ಲಿಯೇ ತೃಪ್ತಿ ಹೊಂದಿರಬೇಕೆಂದು ನಿಶ್ಚಯಿಸಿದನು. ಸವಾರನು ಅವನ ಸ್ವರೂಪವನ್ನು ತಿಳಿದು, ಇನ್ನು ತನ್ನ ಕೆಲಸವಾಯಿತೆಂದು ಮುಂದೆ ಪ್ರಯಾಣ ಬೆಳೆಸಿದನು.

---

೫

ಇತ್ತ ನಿಂಗ ಮೊದಲಾದವರು ಅಜ್ಜನ ದಾರಿ ನೋಡುತ್ತಿದ್ದರು. ಬಸ್ಯಾ ಆಲದ ಮರದ ಮೇಲೇರಿ ಕೆಳಗೆ ಕಾಲು ಬಿಟ್ಟುಕೊಂಡು ಒಂದು ಟೊಂಗೆಯ ಮೇಲೆ ಬೊಡ್ಡೆಗೆ ಆತು ಕುಳಿತುಕೊಂಡು ವಿಚಾರಮಗ್ನನಾಗಿದ್ದನು. 'ಅಜ್ಜ ಇವತ್ತು ಬಂದಾನು! ನಾಳೆ ಬರಬಹುದು. ಮುಂದಿನ ಸಂತಿಗಂತೂ ಒಂದೇ ಬರುವನು. ಒಂದುವೇಳೆ ಬಾರದಿದ್ದರೇನು ಮಾಡುವದು? ಮನೆಯಲ್ಲಿ ಈಪರಿ! ಹೊರಗೆ ನೋಡಿದರೆ ಕಠಿಣ. ಮುಂದೇನುಗತಿ? ಇದೇ ಸ್ಥಿತಿಯಲ್ಲಿ ಇನ್ನೂ ಎಷ್ಟು ದಿವಸವಿರುವದು? ಅಜ್ಜನು ಯಾವಾಗ ಬರುವನೋ ಏನೋ? ಊರಿಗೆ ಹೋದವರದೇನು ಭರವಸೆ? ಅದರಲ್ಲಿ ದೆವ್ವನ ಕೈಯಾಗ ಸಿಕ್ಕರಂತೂ ತೀರಿಯೇ ಹೋಯಿತು. ಇನ್ನು, ಜಾತ್ರೆಗೆ ಹೋಗಿದ್ದಾನೆಯೇ? ಜಾತ್ರಿಯಲ್ಲಿ ಗದ್ದಲವೆಷ್ಟೋ? ಗದ್ದಲದಲ್ಲಿ ಸಿಕ್ಕು ಸತ್ತರೆ ಯಾರು ಕೇಳುವರು? ಜನಜನ ಜಾತ್ರೆ ಕೂಡಿದಾಗ ದನ ಕೂಡ ಪಾರಾಗುವಂತಿಲ್ಲ. ಇವನಂತೂ ಮುದುಕ, ಮೇಲೆ ಸವಾರನ ಸಂಗ ಹೋದವ! ಸವಾರನ ಸಂಗಡ ಹೇಗೆ ನಡೆತಾನೋ ದೇವರೇ ಬಲ್ಲ. ಸವಾರನೇನು ಮೊದಲೇ ಸವಾರ. ಎಲ್ಲಿಯಾದರೂ ಏನಾದರೂ ಸಿಕ್ಕಿತೆಂದರೆ ಎತ್ತಾಗಲಾದರೂ ಕಿತ್ತುಗೊಂಡು ಓಡಿ ಹೋಗುವವರ ಪೈಕಿ. ಈ ಸವಾರನು ಅಂಥವನಲ್ಲ. ಆದರೂ ಈಗಿನ

ಕಾಲದಾಗ ಯಾರನ್ನೂ ನಂಬುವ ಹಾಗಿಲ್ಲ. ಮನೆಯೊಳಗೇ ತಾಳವಿಲ್ಲ. ಒಬ್ಬರಿಗೊಬ್ಬರ ಬಡದಾಟ, ಟೊಪ್ಪಿಗೆ ಆಟ. ಅಂದ ಮೇಲೆ ಎರಡನೆಯದವರಿಗೆ ಯಾಕೆ ಕಾಳಜಿ? ತಮ್ಮದೊಂದು ಸ್ವಾರ್ಥ ಸಾಧಿಸಿದರಾಯಿತು, ಉಳಿದದ್ದೆಲ್ಲ ಹಾಳಾಗಿ ಹತ್ತಿ ಬಿತ್ತಿ ಹೋಗಲಿ! ಏನೂ ಚಿಂತೆಯಿಲ್ಲ. ಇಂಥವರಿಂದಲೇ ಲೋಕೆಲ್ಲ ಹಾಳಾಯಿತು. 'ಇಲ್ಲದಿದ್ರೇನ್ರಿ ಬೇಕಾದ್ದಾಗ ತೃಪ್ತಿ! ಅದಕ್ಕಂತ ಮೊದಲಿನವರು ಸುಖದಿಂದಿದ್ದರು. ಸುಧಾರಕರು ಈಗ ಸುಳ್ಳೇ ಹಿಂದಿನವರನ್ನು ಬಯ್ಯುವರು. 'ಖರೇವಂದ್ರ ಆಗಿನವರ್ಹಂಗ ಈಗನವರಿಲ್ಲ. ಈಗೆಲ್ಲಾರೂ ಲಬಾಡರು.'

ಹೀಗೆ ವಿಚಾರತರಂಗಗಳು ತಲೆದೋರುತ್ತಿರಲು, ಈ ವರೆಗೆ ಮುಚ್ಚಿದ ಬಸ್ಯಾನ ಕಣ್ಣುಗಳು ಅರ್ಧ ತೆರೆದವು. ದೂರದಲ್ಲಿ ಮಂದವಾಗಿ ಕಾಣುವ ಭವ್ಯಮನೆಗಳು ದೃಷ್ಟಿಗೆ ಬಿದ್ದವು. ಕಣ್ಣುಗಳು ಮತ್ತೆ ಮೊದಲಿನಂತೆ ಮುಚ್ಚಿಕೊಂಡವು.

'ಇಕೊಳ್ರಿಪಾ! ನೋಡಿದಿರ್ರ್ಯಾ ಅವನ್ನ? ಏನು ಶಿಖರ! ಏನಿದು! ಆಕಾಶಕ್ಕೆ ಹೋಗ್ಯಾವ! ಇದಿಷ್ಟೇ ಅಲ್ಲ! ಪಾಪ ನೆಲದ ಮೇಲೆ ಓಡಾಡುವ ಕೋಳಿಗಳನ್ನು ಹಿಡಿದು ಆ ಮನೆ ಕಳಸಕ್ಕೆ ಚುಚ್ಚಿ, ಎಮ್ಮಿ ಗಾಣ ತಿರುಗೋ ಹಂಗ ತಿರಗಲಿಕ್ಕೆ ಬಿಟ್ಟಾರ. ಆ! ಏನು ಮಂದಿಪಾ ಈ ಜಗತ್ತನ್ಯಾಗ! ನೋಡ್ರಿ ನೆಟ್ಟಗೆ ನೋಡ್ರಿ! ಎಷ್ಟು ಆರಾಮ ಇದ್ದಾರ! ಒಂದಾರ ಚಿಂತಿ! ಕೇಳಬ್ಯಾಡ! ರಸ್ತೇದಾಗ ನಾಯಿ ಸತ್ತು ಬಿದ್ದರೆ, ಒಳಗೆ ಹಂಗ ಹಾಸಿಗೆ ಮ್ಯಾಗ ಹೊರಳಾಡತಾರ! ಸ್ವರ್ಗಸುಖ ಇಲ್ಲೇ ಅದ!'

ಎನ್ನುವಷ್ಟರೊಳಗೆ ಮೈಮರೆತು, ಜೋಲಿ ಹೋಗಿ ಬಸ್ಯಾ ಗಿಡದ ಮೇಲಿಂದ ಕೆಳಗೆ ಧೊಪ್ಪನೆ ಬಿದ್ದನು. ಅಲ್ಲಿಯೇ ಅವನನ್ನೇ ಹುಡುಕುತ್ತಿದ್ದ ಕಲ್ಲನು ಗಿಡದಡಿಗೆ ನಿಂತು ಅತ್ತಿತ್ತ ನೋಡುತ್ತಿದ್ದನು. ತನ್ನೆದುರಿಗೆ ಧೊಪ್ಪನೆ ಬಿದ್ದುದರ ಸಪ್ಪಳ ಕೇಳಿ ಹೆದರಿದನು. ಹಿಂದುಗಡೆ ಬಸ್ಯಾ ಎಂಬುದನ್ನರಿತು, ಅವನ ಹತ್ತಿರ ಹೋಗಿ ಗಾಳಿ ಹಾಕತೊಡಗಿದನು. ಸ್ವಲ್ಪ ಎಚ್ಚರಿಕೆ ಬಂದ ಮೇಲೆ ಎದ್ದು ಕೂತುಕೊಳ್ಳಲಿಕ್ಕಾಗದೇ ಮಲಗಿಕೊಂಡಲ್ಲಿಯೇ ಕಲ್ಲನ ಕೂಡ ಮಾತನಾಡಲಾರಂಭಿಸಿದನು.

ಬ :— ಏ, ಕಲ್ಲ! ನೀ ಇದನ್ನ ನೋಡಿದೇನ? ಅಲ್ಲದಾವಲ್ಲೋ!

ಆ......ಆ ಮನಿ ಅದಾವಲ್ಲ! ಯಾರ ಮನೆಗಳವು? ಅಲ್ಲಪಾ ಕಲ್ಲ! ಈಟ ದಿನ ಕಾಣತಿದ್ದಿಲ್ಲ. ಈಗೆಲ್ಲಿಂದ ಬಂದವು? ಅಕೋ ಅಲ್ಲಿ ಕಾಣತಾವು! ಮೇಲೆ ನೋಡು ಚಕ್ರ ಹ್ಯಾಂಗ ತಿರಗತಾವು!

ಕಲ್ಲ:— ಅವನ ನೋಡು ನಮ್ಮ ಗಂಟಲಿಗೆ ಗಾಣಾ ಹಾಕೋವು! ನಿಂಗೊತ್ತಿಲ್ಲೇನ? ಛೆ! ತೀರಿತಿನ್ನ ನಮ್ಮದೆಲ್ಲ! ಗುಡಚಾಪಿ ಕಿತ್ತ ಬೇಕಿನ್ನ. ಇತ್ತೀರ ಘಜೂತಿ ಹರಕಾಗತೈತಿ.

ಬ:—ಯಾರವ ನಮ್ಮ ಫಜೂತಿಹರಕ ಮಾಡಾವ? ನೋಡೇ ಬಿಟ್ಟೇನ ಒಂದ ಕೈ! ನಂಗ ಸಿಟ್ಟ ಬಂತಂದ್ರ ಯಾರ ಶಿವ ಬಂದ್ರೂ ನಾ ಕೇಳಾವಲ್ಲ!

(ಹೀಗೆ ನುಡಿಯುತ್ತ ಬಳ್ಳೀ ಹುರುಪಿನಿಂದೆದ್ದು ಕುಳಿತನು.)

ಕಲ್ಲ:— ಬರೇ ಬಾಯಿಬಡಾಯಿ! ಈಗ ನೋಡಲ್ಲ. ಅವರ ಮನಿ ನೋಡ, ನಮ್ಮ ಮುರುಕ ಗುಡಿಸಲ ನೋಡ. ಈಗೇನು ಮಾಡತೀ? ಹೀಂಗ ಮೆತ್ತಗನ್ನವನ್ನ ಕಂಡರ! ಎಜ್ಜನ ಕೂಡ ಹೋದ ಸವಾರ, ಬಚ್ಚಿಟ್ಟ ಬಂಗಾರ ತರಾಕ ಹೋಗ್ಯಾನ ಈಟ ಸುದ್ದಿ ಕೇಳಿದ ಕೂಡಲೇ, ಈ ಮನೆ ಕಟ್ಟಿಕೊಂಡು ಅವ ಬರೋ ಹಾದ್ಯಾಗ ಕೂತಾರ ನೋಡ! ಹಳ್ಳದ ದಂಡ್ಯಾಗಿನ ಕಳ್ಳರ್ಹ್ಹಂಗ— ಇನ್ನೂ ನೋಡ ಮೋಜಾ ಮುಂದ! ನಮ್ಮ ಎಜ್ಜ ಭೋಳೆಶಂಕರ, ಮಬ್ಬ ಬೀಳತಾನ ತೀರಿತು! ನಮಗೇನಾರ ತರತಾನಂದೇನು? ಬರೇ ಹೇಳೋದಷ್ಟ! ಕಳ್ಳರನ್ನ ತಪ್ಪಿಸಿ ಸವಾರನ ಕಡೆಯಿಂದ ಇಸಗೊಂಡು ಬರಬೇಕ ಹೌದಲ್ಲೋ? ಇದೆಂದಾರ ಆದೀತ! ಬಿಟ್ಟಾರ ಕಳ್ಳರು, ಎಲ್ಲಾ ಕಸಕೊಂಡು ಬಡದ ಕಳಸತಾ.! ಇದಲ್ಲದ ನಮ್ಮ ಗುಡಿಸಲಕ್ಕ ಬರತಾರ ನೋಡತೀರ ನೀ, ನಾ ಹೇಳಿದ್ದು ಸುಳ್ಳ ಎಂದೀ!

ಹಿಂದಿನಿಂದ ಮಲ್ಲನು:— 'ಕಲ್ಲ! ಯಾರೋ ಬಂದಾರ ಬಾ.'

ಕಲ್ಲ:— ಯಾರ ಬಂದಾರಪಾ ಮತ್ತ? ಯಾತಕ್ಕಂತ?

ಮಲ್ಲ:— ಮೊನ್ನೆ ಯುಗಾದಿ ಮುಂದ ಬಂದಿದ್ದರಲ್ಲ ಅವರು; ಗುಡಿಸಲಾ ಝಾಡಿಸೋದಕ್ಕಂತ.

ಕಲ್ಲ:— 'ಬಸ್ಯಾ ಕೇಳ! ಕೇಳ!'— ಎನ್ನುತ್ತ ಎದ್ದು ನಡೆದನು ಅವನ ಹಿಂದಿಂದೆ ಬಸ್ಯಾ, ಮಲ್ಲ ಅವರೂ ನಡೆದರು.

---

೬

ಇಳಿಹೊತ್ತು. ಅಸ್ತಾಚಲದ ಕಡೆಗೆ ಒಲೆದ ಸೂರ್ಯನು ತಾನು ಬೆಳಗಿದ ಲೋಕವನ್ನು ಪುನಃ ನೋಡಬೇಕೆಂಬಾಶೆಯಿಂದ ಮುಖ ತಿರುವಿದನೋ ಎಂಬಂತೆ ಸೂರ್ಯನು ಆಕಾಶಮಂಡಲದಲ್ಲಿ ಕಂಗೊಳಿಸುತ್ತಿದ್ದನು. ಲೋಕಪ್ರಿಯನಾದ್ದರಿಂದ, ತನ್ನ ಪ್ರೀತಿಯ ಜಗವನ್ನು ಅಗಲುವ ಪ್ರಸಂಗ ಬಂದುದಕ್ಕೆ ದುಃಖಿತನಾಗಿ, ಕಣ್ಣೀರು ಸುರಿಸುವನೋ ಎಂಬಂತೆ ಕೆಂಪು ಛಾಯೆಯಿಂದೊಡಗೂಡಿದ ಕಣ್ಣುಳ್ಳವನಂತೆ ರವಿಯು ಕಣ್ಣೋಚರನಾಗಿದ್ದನು. ಅಥವಾ ತಾನಗಲಿದ ಮೇಲೆ ಯಾವ ನಿಶಾಚರರು ಲೋಕಕಂಟಕರಂತೆ ಪ್ರಾಣಿವರ್ಗವನ್ನು ಪೀಡಿಸುವರೋ ಎಂದು ಬಗೆದು, ಆ ನೀಚ ವರ್ಗವನ್ನು ಸುಟ್ಟು ಬೂದಿ ಮಾಡುವದಕ್ಕೆ ತನ್ನ ಕಣ್ಣುಗಳಿಂದ ಕಿಡಿಮಳೆಯನ್ನು ಸುರಿಸುತ್ತಿರುವಂತೆ ಕೆಂಪು ವರ್ಣದವನಾಗಿ ತೋರುತ್ತಿದ್ದನು. ಕೆಲವು ವೇಳೆಯ ತರುವಾಯ ಸೂರ್ಯನು ಅಸ್ತಾಚಲದಲ್ಲಿ ಮರೆಯಾಗುವದಕ್ಕೂ, ಆಕಾಶದಲ್ಲಿ ಸವಾರನು ಕಂಗೊಳಿಸುವದಕ್ಕೂ ಸಮಾವೇಶವಾಯಿತು. ಹಕ್ಕಿಪಕ್ಕಿಗಳು ಕಿಲಿಕಿಲಿ ಕುಲುಕುಲು ಎಂದು ಆನಂದದಿಂದ ಚೀರುತ್ತ ತಮ್ಮ ಗೂಡುಗಳನ್ನು ಸೇರುತ್ತಿದ್ದವು. ಮುಂಜಾವಿನಿಂದ ಸಂಜೆಯ ವರೆಗೆ ಸೂರ್ಯರಶ್ಮಿ ಸ್ನಾನದಿಂದ ಶುಚಿರ್ಭೂತರಾದ ಒಕ್ಕಲಿಗರು, ದನಕರುಗಳನ್ನಟ್ಟಿಕೊಂಡು ಮನೆಯ ದಾರಿ ಹಿಡಿದಿದ್ದರು. ನಮ್ಮ ಸವಾರನು ಉತ್ತರ ಮಾರ್ಗವಾಗಿ ಸಾಗಿದ್ದನು. ಉತ್ತರಾಭಿಮುಖನಾಗಿ ಭೂಪ್ರದಕ್ಷಿಣೆ ಮಾಡುವನೋ, ಉತ್ತರಧ್ರುವನನ್ನು ಹಿಡಿದು ತರುವನೋ ಎಂಬಂತೆ ಒಳ್ಳೇ ವೇಗದಿಂದ ಸವಾರನು ಸಾಗಿದ್ದನು. ಮುನಿಯು ಸೂಚಿಸಿದ ಗಂವ್ಹರವು ಇನ್ನೂ ಎಷ್ಟು ದೂರವಿದೆ ಎಂಬ ಚಿಂತೆ; ತನ್ನ ಕಾರ್ಯವನ್ನು ಆದಷ್ಟು ಬೇಗನೆ ಮುಗಿಸಬೇಕೆಂಬ ಹವ್ಯಾಸ; ಹೀಗಾಗಿ ಸವಾರನು ಮನದೊಳಗೆ ವಿಚಾರಿಸುತ್ತ ಮಾರ್ಗಕ್ರಮಣ ಮಾಡುತ್ತಿದ್ದನು. ಲೋಕದೊಳಗೆ ಹೊಳೆಯ ಮಾಲಕರಂಥವರು ಎಷ್ಟು ಜನರಿರುವರೋ, ಇನ್ನೂ ಎಷ್ಟು ಮಂದಿ ಭೆಟ್ಟಿಯಾಗುವರೋ, ಏನೇನು ಎಡರುಗಳು ಬರುವವೋ– ಎಂಬ ವಿಚಾರವೇ ವಿಚಾರ. ಇಷ್ಟರಲ್ಲಿ ತಂಗಾಳಿ ಮೆಲ್ಲನೆ ಮೈಗೆ ಸೋಂಕಹತ್ತಿತು. ಬರಬರುತ್ತ ಗಾಳಿಯು ಬಹಳೇ ತಣ್ಣ

ಗಾಯಿತು. ನೀರಿನ ಹನಿಗಳು ಗಾಳಿಯುಗುಂಟ ಬರುತ್ತಿದ್ದವು. ಸವಾರನು ಆಶ್ಚರ್ಯದಿಂದ ಮೇಲಕ್ಕೆ ಮುಖವೆತ್ತುವಷ್ಟರಲ್ಲಿ ಕೋಲಮಿಂಚು ಮುಗಿಲಲ್ಲಿ ಮಿಂಚಿತು. ಕೆಂಪಗೆ ಕಾದ ಕಬ್ಬಿಣದ ಸಳಿಯನ್ನು ಕಣ್ಣಲ್ಲಿ ಎಳೆದಂತಾಯಿತು. ಸವಾರನು ಮೋರೆಯನ್ನು ಕೈಗಳಿಂದ ಗಟ್ಟಿಯಾಗಿ ಮುಚ್ಚಿಕೊಂಡನು. ಅದೇ ವೇಳೆಗೆ, ಪ್ರಚಂಡ ಭೂಪ್ರದೇಶವು ನೀಚರ ತಾಪದಿಂದ ಪ್ರಕೋಪಿಸಿ ಸ್ಫೋಟವಾಯಿತೋ, ಗಗನಮಂಡಲವು ಸಿಡಿದು ಒಡೆಯಿತೋ ಎಂಬಂತೆ, ಒಂದೇ ಸವನೆ ಕಡ್‌ಕಡ್‌ಖಡಲ್ಲೆಂದು ಸಿಡಿಲು ಆರ್ಭಟಿಸಿತು. ಆ ಸಪ್ಪಳವನ್ನು ಕೇಳಿ ಯಾರು ಬದುಕ್ಯಾರು ? ಸವಾರನು ಮಾತ್ರ ಎದೆಗುಂದಲಿಲ್ಲ. ನೀಲವರ್ಣದ ಆಕಾಶವನ್ನೆಲ್ಲ ಕಪ್ಪು ಮೋಡಗಳು ಮುಸುಕಿದ್ದವು. ಆಗಾಗ್ಗೆ ಹೊಳೆಯುವ ಮಿಂಚಿನ ಛಾಯೆಯೇ ಛಾಯೆ. ದಿಕ್ಕುಗಳು ತಿಳಿಯದಾದವು. ಗಗನಮಾರ್ಗವೆಲ್ಲ ಭಯಂಕರ ರೂಪುಗೊಂಡಿತ್ತು. ಮೇಲೆ ಮೋಡ ಮಿಂಚುಗಳ ಆರ್ಭಟೆ, ಕೆಳಗೆ ಕಣ್ಣೊಡೆಯುವ ಕಾಳ್ಗತ್ತಲೆ, ಇದರ ಜೊತೆಗೆ ಗಾಳಿಯು ಬಿರುಗಾಳಿಯಾಗಿತ್ತು. ಮಳೆಯ ಹನಿಗಳು ಬಾಣಗಳಂತೆ ಮೈಗೆ ತಾಕುತ್ತಿದ್ದವು. ಇಂತಹ ಹೃದಯದ್ರಾವಕವಾದ ಸಮಯದಲ್ಲಿ, ಬೇರೆ ಯಾರಾದರೂ ಸಿಕ್ಕಿದ್ದರೆ ಅನಾಮಶೇಷರಾಗಿ ಹೋಗಬಹುದಾಗಿತ್ತು. ಸವಾರನು ತನ್ನ ಕುಲದೇವತೆಯನ್ನು ಸ್ಮರಿಸಿ, ಧೈರ್ಯದಿಂದ ತನ್ನ ಮಾರ್ಗವಾಗಿ ನಡೆದಿದ್ದನು. ಕುದುರೆಯಾದರೂ ಯಾವದಕ್ಕೂ ಹೆದರದಾಗಿತ್ತು. ಮನೋವೇಗವನ್ನು ಕೂಡ ಮೀರಿ, ಸವಾರನನ್ನು ಕರೆದುಕೊಂಡು ಒಯ್ಯಲು ಹವಣಿಸುತ್ತಿತ್ತು. ನಾಳೆ ಬೆಳಗಾಗುವದರೊಳಗೆ ಗಂಪ್ಪುರಕ್ಕೆ ಹೋಗಿ ಮುಟ್ಟಬೇಕಾಗಿತ್ತು. ಇಲ್ಲವಾದರೆ ಮತ್ತೊಂದು ದಿವಸ ತಡವಾಗುತ್ತಿತ್ತು. ಆ ಸ್ಥಾನಕ್ಕೆ ರಾತ್ರಿಯಲ್ಲಿಯೇ ಹೋಗಲು ಸಾಧ್ಯ. ಹಗಲು ಯಾರಾದರೂ ಹೋಗಲೆತ್ನಿಸಿದರೆ ಒಂದೇ ಕ್ಷಣದಲ್ಲಿ ಭಸ್ಮವಾಗಿ ಹೋಗುತ್ತಿದ್ದರು. ನಾಳೆ ಮಂಗಳವಾರವಿದ್ದುದರಿಂದ ತನ್ನ ಕಾರ್ಯವು ಸುಲಭವಾಗಿ ಕೈಗೂಡುವದೆಂಬದು ಅವನಿಗೆ ಅರಿಕೆಯಾಗಿತ್ತು. ಆದರೆ ಅನೇಕ ದಿವಸಗಳಿಂದ ಆಹಾರವಿಲ್ಲದೆ ಸವಾರನು ಕಂಗಾಲಾಗಿದ್ದನು. ಹಸಿವೆಯಿಂದ ಬಳಲಿದರೂ ಈ ವರೆಗೆ ತಾಳಿಕೊಂಡಿದ್ದನು. ಈಗ ಮಾತ್ರ ತಡೆಯುವದಾಗಲಿಲ್ಲ. ಕೈಮೀರಿ

ಹೋಯಿತು. ಏನು ಮಾಡಬೇಕೆಂಬದು ತಿಳಿಯದಾಯಿತು. ಎಲ್ಲಿಯಾದರೂ ವಿಶ್ರಮಿಸಿ ಆಹಾರ ತೆಗೆದುಕೊಳ್ಳಬೇಕೆಂದರೆ, ಬೆಳಗಾಗುವದರೊಳಗೆ ಗಂಧ್ವರಕ್ಕೆ ಹೋಗುವದು ಸಾಧ್ಯವಾಗುತ್ತಿದ್ದಿಲ್ಲ. ಆಗ ರಾತ್ರಿ ಸುಮಾರು ೧೨ ಗಂಟೆ ಆಗಿತ್ತು. ಇತ್ತ ಕ್ಷುಧಾಪೀಡೆ, ಅತ್ತ ಮುಂದಿನ ಕಾರ್ಯಸಾಧನೆ, ಮೇಲೆ ಮಳೆಗಾಳಿಗಳ ಹೊಡತ ಮಧ್ಯರಾತ್ರಿ, ಹೀಗಾಗಿ ಸವಾರನು ಒಳ್ಳೇ ಪೇಚಾಟದಲ್ಲಿ ಬಿದ್ದನು. ಈ ಹೊತ್ತಿನಲ್ಲಿ ಆಹಾರವಾದರೂ ಎಲ್ಲಿ ಸಿಗುವದು ? ಜಗವೆಲ್ಲ ಅಂಧಃಕಾರದಲ್ಲಿ ಗಾಢನಿದ್ರೆಗೊಳಗಾಗಿತ್ತು. ತನ್ನ ಕುಲದೇವತೆಯೂ ಹಣ್ಣುಗಳನ್ನು ಕೊಟ್ಟಿದ್ದಿಲ್ಲ. ಮುನಿಯೂ ಆಹಾರದ ಬಗ್ಗೆ ಏನೂ ಹೇಳಿರಲಿಲ್ಲ. ಆದರೆ ಕುದುರೆಯು ತನ್ನ ಸಂಕಟ ಕಾಲದಲ್ಲಿ ಸಹಾಯ ಮಾಡುವದೆಂದು ಹೇಳಿದ್ದು ಅವನಿಗೆ ಜ್ಞಾಪಕವಾಯಿತು. ಮುನಿಯು ಸೂಚಿಸಿದ ಮಂತ್ರವನ್ನು ಕುದುರೆಯ ಕಿವಿಯಲ್ಲಿ ಉಚ್ಚಾರ ಮಾಡಿದ ಕೂಡಲೇ ಅದು ಕೆಳಗೆ ಇಳಿಯಲಾರಂಭಿಸಿತು. ಹಾಗೆಯೇ ಇಳಿಯುತ್ತ ಕಡೆಗೊಂದು ಗುಡ್ಡದ ಮೇಲೆ ಬಂದು ನಿಂತಿತು. ಸವಾರನು ಕುದುರೆಯಿಂದ ಕೆಳಗೆ ಇಳಿದನು. ಮುಂದೇನು ವಿಚಾರವೆನ್ನುವಷ್ಟರಲ್ಲಿ ಬದಿಗೊಂದು ಗುಡಿಸಲು ಕಾಣಿಸಿತು. ಸವಾರನು ಅಲ್ಲಿಗೆ ಹೋಗಿ ತೊಪ್ಪನೆ ತೊಯ್ದು ಅರಿವೆಗಳನ್ನು ತೆಗೆದು, ಗುಡಿಸಲದಲ್ಲಿದ್ದ ನಾರಿನ ಬಟ್ಟೆಯನ್ನು ತೊಟ್ಟುಕೊಂಡನು. ಅಷ್ಟರಲ್ಲಿ ಮಳೆಯು ಕಡಿಮೆಯಾಗಿತ್ತು. ಗಾಳಿಯು ಸಣ್ಣಾಗಿ ಬೀಸುತ್ತಿತ್ತು. ಕುದುರೆಯು ಗುಡಿಸಲಿನ ಎದುರಿಗಿರುವ ಪೇರಲಗಿಡದ ಬುಡಕ್ಕೆ ಹೋಗಿ ನಿಂತಿತ್ತು. ಅದರ ಹಣೆಯಿಂದ ಗುಡ್ಡದ ಮೇಲೆಲ್ಲ ಬೆಳಕು ಬಿದ್ದಿತ್ತು. ಪೇರಲಹಣ್ಣುಗಳನ್ನು ತಿನ್ನುವದಕ್ಕೆಂದು ಸವಾರನು ಗಿಡದ ಬಳಿಗೆ ಹೋದನು. ಚೆನ್ನಾಗಿ ಪಕ್ವವಾದ ಪೇರಲಹಣ್ಣುಗಳು ಗಿಡದ ತುಂಬ ಅಂಟಿಕೊಂಡಿದ್ದವು. ಅಲ್ಲಲ್ಲಿ ಗಡ್ಡೆ-ಗೆಣಸುಗಳು ಲೆಕ್ಕವಿಲ್ಲದೆ ಬಿದ್ದಿದ್ದವು. ಇದನ್ನೆಲ್ಲ ನೋಡಿ ಸವಾರನು ಹಿಗ್ಗಿದನು. ತಾನು ಬಂದ ಕಾರ್ಯವು ನೆರವೇರಿತೆಂದು ತಿಳಿದನು. ಇನ್ನು ತೀವ್ರವೆ ಹಣ್ಣು-ಗಡ್ಡೆಗಳನ್ನು ತಿಂದು ತನ್ನ ಮಾರ್ಗವನ್ನನುಸರಿಸಬೇಕೆಂದು ಬಗೆದು ಪೇರಲ ಟೊಂಗೆಯನ್ನು ಎಡಗೈಯಿಂದ ಹಿಡಿಯಲನುವಾದನು. ಆಕ್ಷಣವೇ ಆವನ ಮುಂಗೈ ಕಡಿದು ನೆಲಕ್ಕೆ

ಬಿದ್ದಿತು. ರಕ್ತವು ಧಾರೆಗಟ್ಟಿ ಹರಿಯುತೊಡಗಿತು. ಸವಾರನು ಸ್ವಲ್ಪ ಹೆದರಿದನು. ಕುದುರೆಯ ಕಾಲುಗಳು ಕಡಿದು ಬಿದ್ದಿದ್ದವು. ಅದನ್ನು ಕಂಡು ಸವಾರನು ಸಿಟ್ಟಿಗೆದ್ದು ಖಡ್ಗವನ್ನು ಹಿರಿದು ತೆಗೆದನು. ಆ ಪರ್ವತ ವನ್ನೇ ಉರುಳಿಸುವದಕ್ಕೆ ಸಿದ್ಧನಾದನು. 'ಈ ಪರಿ ಪೀಡಿಸುವವರಾರು?' ಎಂಬದನ್ನು ಅರಿತು ಅವರನ್ನೆಲ್ಲ ಸಮೂಲ ನಾಶ ಮಾಡುವೆನೆಂದು ಕೋಪಾಗ್ನಿಯಿಂದ ತಪ್ತನಾದನು. ಪ್ರಳಯಕಾಲದ ರುದ್ರನಂತೆ ಅವನ ಸ್ವರೂಪವಾಗಿತ್ತು. ಅಂದಮೇಲೆ ಕೇಳುವದೇನು? ಏನಾದೀತು ಏನಾಗ ಲಿಕ್ಕಿಲ್ಲ? ಕರವಾಳವನ್ನು ಒಮ್ಮೆ ಆಕಾಶದಲ್ಲಿ ಝಳಪಿಸಿದನು; ಸುತ್ತಲೂ ತಿರುಹಿದನು. ಸಮೀಪದಲ್ಲಿ ಯಾರೂ ಇದ್ದಿಲ್ಲ. ಅತ್ತಿತ್ತ ನೋಡಿದನು. ಬರೀ ಆಕಾಶ!

ಅಷ್ಟರಲ್ಲಿ ಪರ್ವತದ ಅಡಿಯಲ್ಲಿ ಭಯಂಕರ ಸಪ್ಪಳವಾದಂತೆ ಕೇಳಿ ಸಿತು. ಸವಾರನು ಸ್ವಲ್ಪ ಬಾಗಿನೋಡಿದನು. ಅಬ್ಬಬ್ಬ! ಸಾವಿರಾರು ಭೂತಪಿಶಾಚಿಗಳ ಕೂಟ ನೆರವೇರಿತ್ತು. ಅಕರಾಳ ವಿಕರಾಳ ಭೂತಗಳು; ಕೆಲವಕ್ಕೆ ತಲೆಯ ಮೇಲೆ ಕಾಲುಗಳು. ಕೆಲವುಗಳ ಹೊಟ್ಟೆಗಳು ದೊಡ್ಡ ದಿನ್ನೆಗಳ ಸರಿಹೋಲುತ್ತಿದ್ದವು; ಮೈತುಂಬ ಕಣ್ಣುಗಳು, ಭೂಮಿಯಷ್ಟು ದ್ದವಾದ ಕರೇ ಕೂದಲುಗಳು ತಲೆತುಂಬ ಬೆಳೆದಿದ್ದವು. ರುಂಡ ಮಾಲೆಗ ಳಂತೂ ಎಣಿಕೆಯಿಲ್ಲದಷ್ಟು ಸೂರೆಗೊಂಡಿದ್ದವು. ಮಧ್ಯದಲ್ಲಿ ಭುಗ್ಗೆಂದು ರಿವ ಅಗ್ನಿಜ್ವಾಲೆಯು. ಅದರ ಸುತ್ತಲೂ ಭೂತಗಳು ಒಂದಕ್ಕೊಂದು ಕೈಹಿಡಿದುಕೊಂಡು ಆರ್ಭಟಿಸುತ್ತ, ಚೀರುತ್ತ ಕೇಕೇ ಹೊಡೆಯುತ್ತ ಕುಣಿಯುತಿದ್ದವು; ಒಮ್ಮೊಮ್ಮೆ ಜ್ವಾಲೆಯನ್ನು ನುಂಗುವದಕ್ಕೆ ಹವಣಿ ಸುವವು. ಒಮ್ಮೊಮ್ಮೆ ಅಗ್ನಿಕುಂಡದಲ್ಲಿ ಜಿಗಿಯಲು ಯತ್ನಿಸುವವು. ಮತ್ತೊಮ್ಮೆ ಜ್ವಾಲೆಯನ್ನೆಲ್ಲ ನೊಂದಿಸುವವು. ಹರಿದು ಹೋಗುವ ನದಿ, ಹಳ್ಳಗಳನ್ನೇ ಹಿಡಿದುತಂದು ಕುಂಡಲದಲ್ಲಿ ಸುರುವುತಿದ್ದವು. ಮತ್ತೆ ಅಗ್ನಿಯನ್ನು ಪುಟಮಾಡುವವು; ಹೀಗೆ ಮನಬಂದಂತೆ ರಣಕ್ರೀಡೆಯಾ ಡುವದನ್ನು ಸವಾರನು ನೋಡಿ ಎದೆಯೊಡಕೊಂಡನು ಹಿಂದಕ್ಕೆ ಬಿದ್ದನು. ಆ ಕ್ಷಣವೇ ಸವಾರನು ಸರ್ರನೇ ಗುಡ್ಡದತುದಿಯಿಂದ ಜರೆದು ಜಾರುತ್ತ ಅಡಿಯಲ್ಲಿರುವ ಅಗ್ನಿಕುಂಡದಲ್ಲಿ ಬಿದ್ದನು. ಅವನ ಕೊರಳಲ್ಲಿರುವ

ರುದ್ರಾಕ್ಷಿಯ ಸ್ಪರ್ಶದಿಂದ ಅಗ್ನಿಯು ಕೂಡಲೇ ಶಾಂತವಾಯಿತು. ಪಿಶಾಚಿಗಳ ಕೋಪವು ಪ್ರಕೋಪವಾಯಿತು.

'ಯಾರವನು? ಹೊಡೆಯಿರಿ! ತಲೆ ಕಡಿಯಿರಿ! ಬಿಡಬೇಡಿರಿ! ಬರ್ಚಿಯಿಂದ ತಿವಿಯಿರಿ! ಚೆಂಡ ಹಾರಿಸಿರಿ! ನಮ್ಮ ಗಿಡದ ಹಣ್ಣುಗಳನ್ನು ಕೊಯ್ದುವನಿವನು! ಬಿಡಬೇಡರಿ! ರಕ್ತವನ್ನು ಕುಡಿಯಿರಿ! ನರಗಳನ್ನು ಹಿರಿಯಿರಿ! ಅರೆ ಡುರ್! ಹೋ!! ಹೋ!!!' ಎಂದು ಬೊಬ್ಬಿರಿದು ಕೂಗಿಟ್ಟವು. ಒಂದು ಹಿರಿಯ ಭೂತವು ಮುಂದೆ ಬಂದು ಉಳಿದ ಪಿಶಾಚಿಗಳನ್ನು ಸುಮ್ಮನಿರಿಸಿ, ಕುಂಡಲದಲ್ಲಿ ಏನು ಬಿದ್ದಿದೆಯೆಂದು ನೋಡುವದಕ್ಕೆ ನೆಲದ ಮೇಲೆ ಕೈಯಾಡಿಸಿತು. ಏನೂ ಸಿಗಲಿಲ್ಲ. ಆದರೆ ಒಂದು ಗೊಂಬೆಯು ಮಾತ್ರ ಕೈಗೆ ಹತ್ತಿತು. ಆ ಗೊಂಬೆಯನ್ನು ಅತ್ತಿತ್ತ ತಿರುವಿ ನೋಡಿತು, ತಲೆಗೊಂದು ಪೆಟ್ಟು ಕೊಟ್ಟಿತು, ಮೇಲಕ್ಕೆ ತೂರಿ ಹಿಡಿಯಬೇಕೆಂದು ಮೇಲೆ ಮುಖ ಮಾಡಿದಾಗ್ಗೆ ಗೊಂಬೆಯು ಸಳ್ಳನೆ ಬಂದು ಆ ಭೂತದ ಕುತ್ತಿಗೆಯನ್ನೇ ಹಿಡಿಯಿತು. ಭೂತವು ಚಿಟ್ಟೆಂದು ಚೀರಲಾರಂಭಿಸಿತು. ಅದರ ದನಿ ಕೇಳಿ ಉಳಿದ ಭೂತಗಳೆಲ್ಲ ಹೆದರಿ ದಿಕ್ಕಾಪಾಲಾಗಿ ಓಡಿಹೋದವು.

'ಬಿಡೋ ಮಾರಾಯ! ತಪ್ಪಾಯಿತು ಬಿಡು! ಜೀವದಾನ ಕೊಡು' ಎಂದು ಭೂತವು ಅಂಗಲಾಚಿ ಬೇಡಿಕೊಳ್ಳಲು, ಗೊಂಬೆಯು ಕೆಳಗೆ ಬಿದ್ದು ಸವಾರನ ರೂಪ ತಾಳಿತು. ಅದನ್ನು ಕಂಡು ಭೂತವು ನಾಪ್ಟಾಂಗ ನಮಸ್ಕಾರ ಮಾಡಿ, ತಪ್ಪಾಯಿತೆಂದು ಗಲ್ಲಗಲ್ಲ ಬಡೆದುಕೊಂಡು ಮುಖ ತಗ್ಗಿಸಿತು. ಆಗ್ಗೆ ಸವಾರನು ಅದರ ಪೂರ್ವಚರಿತೆಯನ್ನರಿತು, ಭೂತರೂಪೀ ಮನುಷ್ಯನ ಕೂಡ ಮಾತನಾಡಲಾರಂಭಿಸಿದನು.

'ಏ ಪಿಶಾಚಿ! ಬಿಡು ನಿನ್ನಾಶೆಯನ್ನು! ಗಡ್ಡೆಗೆಣಸುಗಳನ್ನು ನೀನೊಬ್ಬನೇ ತಿನ್ನಬೇಕೆಂದೆಣಿಸಿದಿಯಾ? ಅದಕ್ಕಾಗಿ ನಿನ್ನ ಗತಿ ಹೀಗಾಗಿದೆ! ಸಕಲ ಪ್ರಾಣಿಗಳಿಗೂ ತಿನ್ನುವದಕ್ಕೆ ಬಿಡು! ಇಲ್ಲವಾದರೆ ನಿನ್ನ ಹೊಟ್ಟೆ ಉರಿದೀತು! ಆಶಾಭೂತ ಬಡೆದೀತು! ಹಸಿವೆಯಿಂದ ಬಳಲಿ ಬಂದರೆ ಒಂದು ಪೇರಲ ಹಣ್ಣು ಸಿಗದಂತೆ ಮಾಡಿದಿಯಾ? ನನ್ನ ಮುಂಗೈಯನ್ನು ಕಡೆದು ಚೆಲ್ಲಿದಿಯಾ? ಪಾಪಿ! ಇಕೋ ಈಗ ಹೇಗಾಯಿತು!

ಆಗೋ ಅತ್ತ ನೋಡು ! ಕಣ್ದೆರೆ ! ಅನೇಕ ಊರುಗಳು ಹಸಿವೆಯ ಉರಿಯಲ್ಲಿ ಭಗ್ಗೆಂದು ಉರಿಯುತ್ತಿರುವದನ್ನು ನೋಡು ! ಅದನ್ನು ನೊಂದಿಸಲು ನೀರಲ ಹಣ್ಣಿನ ರಸವನ್ನಾದರೂ ಒಯ್ಯುವ ಯೋಚನೆ ಮಾಡಿದಿಯಾ ? ಕಣ್ಣಾರೆ ಕಂಡು ಉರಿಯನ್ನು ಆರಿಸಲಿಲ್ಲವೇ ? ದುರಾತ್ಮಾ ! ಇಕೋ, ನಿನ್ನೆಡೆಗೆ ಬರುತ್ತಿದೆ ಅದರ ಝಳವು ! ಅನುಭೋಗಿಸು ! ಇಲ್ಲವಾದರೆ ಶರಣು ಹೋಗು !' ಎಂದು ಗದ್ದರಿಸಿ ಒಂದು ರುದ್ರಾಕ್ಷಿಯನ್ನು ಆ ಭೂತಪ್ರಾಣಿಯ ಮೇಲೆ ಎಸೆಯುವದಕ್ಕೆ ಅನುವಾದನು. ಅದನ್ನರಿತು ಪಿಶಾಚಿಯು ಧೊಪ್ಪನೆ ನೆಲಕ್ಕೆ ಬಿದ್ದು ಹೊರಳಾಡಲಾರಂಭಿಸಿತು. ಸವಾರನು ಅದನ್ನು ಸಂತೈಸಿ, ಅದರ ತಲೆಯ ಮೇಲೆ ಕೈಯಿಟ್ಟನು. ಕೂಡಲೆ ಪರ್ವತದ ಮೇಲಿಂದ ನಾನಾತೆರದ ಹಣ್ಣುಗಳೂ ಗಡ್ಡೆಗಳೂ ತೆರಪಿಲ್ಲದೆ ಉರುಳಿ ಬೀಳಹತ್ತಿದವು. ನಾಲ್ಕೂ ದಿಕ್ಕಿನ ಕಡೆಗೆ ಹಾರಿ ಹೋಗಹತ್ತಿದವು. ಸುತ್ತಲೂ ಇದ್ದ ಉರಿಯು ಶಾಂತವಾಯಿತು. ಸವಾರನ ಮುಂಗೈಯು ಮೊದಲಿದ್ದಂತಾಯಿತು. ಆ ಕ್ಷಣಕ್ಕೆ ಕುದುರೆಯು ಓಡಿ ಬಂತು, ಇನ್ನು ತಡ ಮಾಡಬಾರದೆಂದು ವಿಚಾರಿಸಿ, ಸವಾರನು ಕುದುರೆಯನ್ನು ಚಪ್ಪರಿಸಿ, ಒಂದೇ ಒಂದು ಪೇರಲಹಣ್ಣನ್ನು ತಿನ್ನುತ್ತ ಕುದುರೆಯನ್ನು ಹತ್ತಿದನು. 'ಜಯ ಮಾಂಕಾಳಿ ಜಯ !' ಎಂದು ಘೋಷ ಮಾಡಿ ಲಗಾಮ ಜಗ್ಗುವದಕ್ಕೂ ಮೊದಲನೇ ಸಲ ಕೋಳಿ ಕೂಗುವದಕ್ಕೂ ಸರಿಯಾಯಿತು.

---

೭

ವಿಶಾಲವಾದ ಭೂಮಿ. ಅಪಾರವಾದ ಆಕಾಶ. ಅದ್ಭುತವಾದ ಕಾಡು. ಭೂಮಿಯಲ್ಲಿ ಅನೇಕ ಕಾಡುಗಳಿದ್ದರೂ ಒಂದನ್ನೊಂದನ್ನು ಕಾಣಬಹುದು. ಆದರೆ ಈ ಕಾಡು ಬಚ್ಚಿಟ್ಟದ್ದು. ಯಾರಿಗೂ ಕಂಡಿಲ್ಲ. ಗೊತ್ತಿಲ್ಲ. ಗೊತ್ತಿದ್ದರೂ ಅದರ ಸಮೀಪಕ್ಕೆ ಹೋಗುವ ತ್ರಾಣವಿಲ್ಲ. ಧೈರ್ಯವಿಲ್ಲ. ಭಯಂಕರವಾದ ಕಾಡು. ಸುತ್ತಲೂ ಪ್ರಜ್ವಲಿಸುವ ಜ್ವಾಲಾಜಾಲವು ಪ್ರಳಯಕಾಲದ ದಳ್ಳುರಿಯನ್ನು ಮೀರಿತ್ತು. ಮುಗಿಲನ್ನು ಮುಟ್ಟುವಂತಹ ಎತ್ತರವಾದ ಮರಗಳು ದಟ್ಟವಾಗಿ ಬೆಳೆದಿದ್ದವು. ಅನೇಕ ಕ್ರೂರಮೃಗಗಳು ಮನೆಮಾಡಿಕೊಂಡಿದ್ದವು. ಕಾಡಿನೊಳಗೆ

ಹೋಗುವದು ಅಸಾಧ್ಯ. ಹಗಲೆಲ್ಲ ಸುತ್ತಲಿರುವ ಜ್ವಾಲೆಯ ಭಯ. ರಾತ್ರಿಯಲ್ಲಿ ಕಾಡುಮೃಗಗಳ ಆರ್ಭಟಿತೆ. ಇದರಿಂದ ಅರಣ್ಯವು ಭಯಂಕರ ಸ್ವರೂಪ ಗೊಂಡಿತ್ತು. ಇದೇ ಕಾಡಿನಲ್ಲಿ ಬಚ್ಚಿಟ್ಟ ಬಂಗಾರವಿದೆಯೆಂಬ ವದಂತಿ. ಬಚ್ಚಿಟ್ಟದ್ದನ್ನು ಕದ್ದುಕೊಂಡೊಯ್ಯಬಹುದಾಗಿತ್ತು. ಆದರೆ ಹಾಗೆ ಮಾಡುವದು ದುಃಸ್ಸಾಧ್ಯ. ಅಲ್ಲದೇ ಅಸಾಧ್ಯ. ಹೇಗಾದರೂ ಮಾಡಿ ರಾತ್ರಿಯಲ್ಲಿಯೇ ಒಳಗೆ ಧುಮುಕಿ, ಬೆಳಗಿನ ವರೆಗೆ ಜೀವದಿಂದ ಅಡಗಿಕೊಂಡಿರಬೇಕಾಗುತ್ತಿತ್ತು. ಮುಂದೆ ಅನೇಕ ಸಂಕಟಗಳು. ದಟ್ಟವಾಗಿ ಬೆಳೆದ ಮರಗಳು. ಸುಲಭ ಮಾರ್ಗಗಳು ಇಲ್ಲವೇ ಇಲ್ಲ. ನಾನಾತೆರದ ಮಾರ್ಗವಾಗಿ ಹೋಗಬೇಕಾಗುತ್ತಿತ್ತು. ಕಾಡಿನ ಮಧ್ಯದಲ್ಲಿ ಒಂದು ಗಂವ್ಹರವು. ಅದರ ಸುತ್ತಲು ಕಣ್ಣಿಗೆ ಕಾಣದ ಕಟ್ಟಾದ ಕಾವಲು. ಇದಲ್ಲದೇ ಒಂದು ಲಂಡ ಬಾಲದ ನಾಯಿಯು ಆ ಗಂವ್ಹರದ ಬಾಗಿಲ ಮುಂದೆ ಕಾಯ್ದುಕೊಂಡಿರುವದು. ಜಾತಿಯಿಂದ ನಾಯಿಯಾಗಿದ್ದರೂ ಪಶುವೃತ್ತಿಯಿಂದ ಕ್ರೂರ ಗುಣಗಳು ಅದರಲ್ಲಿ ವಿಶೇಷವಾಗಿ ನೆಲೆಗೊಂಡಿದ್ದವು. ಗಂವ್ಹರದ ಸರ್ವಾಧಿಕಾರಿ ಎಂಬ ಹೆಮ್ಮೆ ಅದಕ್ಕೆ. ಒಂದಾನೊಂದು ಕಾಲದಲ್ಲಿ ಲಕ್ಷ್ಮೀ ಕಟಾಕಟಾಕ್ಷದಿಂದ ಭೂಕಂಪವುಂಟಾಗಿ ಸ್ಫೋಟವಾಗಲು, ಭೂತಳದಲ್ಲಿದ್ದ ಎಲ್ಲ ಬಂಗಾರವು ಹರಿದು ಬಂದು, ಒಟ್ಟುಗೂಡಿ, ಇಲ್ಲಿ ರಾಶಿಯಾಗಿ ಹೊರಬಿದ್ದಿತು. ಆಗ ದೇವದುಂದುಭಿಗಳು ಲೋಕದೊಳಗೆ ಮೊಳಗಿದವು. ಜಗವೆಲ್ಲ ಆನಂದಸಾಗರದಲ್ಲಿ ಮುಳುಗಿತು. 'ದೇವರು ಸತ್ಯ' ಎಂಬದು ಬಡಬಗ್ಗರಿಗೆ ಮನವರಿಕೆಯಾಯಿತು. 'ಬಂಗಾರ' ಶ್ರವಣ ಮಾತ್ರದಿಂದಲೇ ಹಸಿವೆ ನೀರಡಿಕೆಗಳು ತಗ್ಗಿದವು. 'ರಾಶಿರಾಶಿಯಾಗಿ ಬಿದ್ದಿದೆ' ಎಂಬದನ್ನು ಅರಿತು, ಕೈಕಾಲುಗಳು ಬಲಗೊಂಡವು. ಯಾವದಾದರೊಂದು ದಿವಸ ಹೋಗಿ, ಬೇಕಾದಷ್ಟು ಬಂಗಾರವನ್ನು ಬಳಕೊಂಡು ಬಂದರಾಯಿತೆಂದು ಜನಮನ ತಣಿದಿತ್ತು.

ಆದರೆ ಆ ಗಂವ್ಹರದ ಮೇಲೆ ನಾಯಿಯು ತನ್ನ ಛತ್ತರಿಗೆಯನ್ನು ಹಿಡಿಯಿತು. ಬರಬರುತ್ತ ತನ್ನದನ್ನಾಗಿ ಮಾಡಿಕೊಂಡಿತು. ಆರಿಗೂ ಅರಿಯದಂತೆ, ಆರಿಗೂ ಸಿಗದಂತೆ, ಆರಿಗೂ ಹತ್ತರ ಬರಗೊಡದಂತೆ ವ್ಯವಸ್ಥೆಯನ್ನುಂಟು ಮಾಡಿತು. ಅನೇಕರು ಬಂದು, ದೂರ ನಿಂತು ನೋಡಿ

ಹೋದರು. ನಾಯಿಯು ಅವರನ್ನು ದೂರದಿಂದಲೇ ಹೆದರಿಸುತ್ತ ನಾನಾ ತೆರದ ಬಾಧೆಗಳಿಗೀಡು ಮಾಡುತ್ತ, ಬಂಗಾರವನ್ನು ತನಗೇ ಇಟ್ಟು ಕೊಂಡಿತ್ತು. ಯಾರೂ ಬರುವಂತಿದ್ದಿಲ್ಲ. ಕೆಲವರು ನಾಯಿಯ ಶೂಲಕ್ಕೆ ಸಿಕ್ಕು ಸತ್ತರು; ಕೆಲವರು ನಾಯಿಯ ನಂಜಿನಿಂದ ಹುಚ್ಚೆದ್ದು ಓಡಿ ಹೋದರು; ಇನ್ನೂ ಕೆಲವರು ನಾಯಿಯ ಕುಲವನ್ನು ಹಳಿದರು, ಶಪಿಸಿದರು, ಬಡಿಗೆಯನ್ನು ಬೀಸಿ ಬೆದರಿಸಿದರು, ಕಲ್ಲೊಗೆದರು. ಆದರೂ ನಾಯಿಯು ಅವರನ್ನು ಹತ್ತಿರ ಬರಗೊಡುತ್ತಿದ್ದಿಲ್ಲ. ಈ ಒಳಗಾಗಿ ಬಂಗಾರದ ಸುತ್ತಲೂ ಒಂದು ಅಮಾನುಷವಾದ ಅರಣ್ಯವೇ ಬೆಳೆಯಿತು. ಆದ್ದರಿಂದ ಜನರು ಹಿಂತೆಗೆದರು. ಯಾವ ಉಪಾಯದಿಂದಾದರೂ ಆ ನಾಯಿಯ ಬಾಲವನ್ನು ಕತ್ತರಿಸಲೆತ್ನಿಸಿದರು. ಯಾಕಂದರೆ ಬಾಲದಲ್ಲಿಯೇ ಅದರ ಜೀವವಿದೆ ಎಂಬ ಸುದ್ದಿ ನಾಡೊಳಗೆ ಹಬ್ಬಿತ್ತು. ಆದರೆ ಅದೂ ಸಾಧ್ಯವಾಗಲಿಲ್ಲ. ಕಡೆಗೆ ನಿರಾಶರಾಗಿ ತಮ್ಮ ಹಣೆಬರಹವನ್ನೋ, ನಸಿಬವನ್ನೋ, ತಾವು ಗೈದ ಪಾಪವನ್ನೋ ನೆನೆಸಿ, ತಮ್ಮನ್ನು ತಾವೇ ಹಳಿದುಕೊಂಡು, ಮತ್ತೆ ಪೂರ್ವದ ನಿರ್ಜೀವ ಜೀವನದಲ್ಲಿ ಹಾಗೂ ಹೀಗೂ ಕಾಲ ಕಳೆಯತೊಡಗಿದರು. ದೇವರು ಕೊಟ್ಟದ್ದನ್ನೆಲ್ಲ ದೆವ್ವ ಕಚ್ಚಿಕೊಂಡಿತೆಂದು ಬಗೆದು, ದೆವ್ವನನ್ನು ತಮ್ಮ ಹಲ್ಲುಗಳಲ್ಲಿ ಕಟಗರಿಸಿ, ಅದರ ಹಾವಳಿಗೆ ಬೇಸತ್ತು, ಎಲ್ಲಿಯಾದರೂ ಓಡಿಹೋಗಬೇಕೆಂದು ಬಯಸುತ್ತಿದ್ದರು. ಆದರೆ ಗಾಳಿದೆವ್ವ ಎಲ್ಲಿ ಹೋದಲ್ಲಿ ಬರುವದು. ಸುಡುಗಾಡಕ್ಕೆ ಹೋದರೂ ಸರಿ, ಅಲ್ಲಿಯೂ ಹಾಜರ! ಗಾಳಿದೆವ್ವನ ಸೂತ್ರ ನಾಯಿಯ ಬಾಲದಲ್ಲಿ. ಸೂತ್ರಕ್ಕೆ ಕತ್ತರಿ ಯಾರಲ್ಲಿ? ನಮ್ಮ ಸವಾರನಲ್ಲಿ! ಆದರೆ ಸವಾರನು ಇನ್ನೂ ಬಂದಿರಲಿಲ್ಲ. ಈಗಾಗಲೇ ಅರುಣೋದಯವಾಗಿ ಬಹಳ ಹೊತ್ತಾಗಿತ್ತು. ಸೂರ್ಯೋದಯಕ್ಕೆ ಕೇವಲ ಒಂದು ನಿಮಿಷ ಉಳಿದಿತ್ತು. ಅಷ್ಟರಲ್ಲಿಯೇ ಸವಾರನು ಅರಣ್ಯದ ಗಡಿ ದಾಟಿ ಒಳಗೆ ಬರಬೇಕಾಗಿತ್ತು. ಪೂರ್ವ ದಿಕ್ಕಿಗೆ ಕೆಂಪು ಛಾಯೆ ಒಡಮೂಡಿದೆ. ನಕ್ಷತ್ರಗಳು ಅಡಗಿವೆ. ಹಕ್ಕಿಪಕ್ಕಿಗಳು ಸೂರ್ಯನಾರಾಯಣನನ್ನು ತಮ್ಮ ಗಾನದಿಂದ ಸ್ವಾಗತ ಮಾಡುತ್ತಲಿವೆ. ಕಾಡೊಳಗಿನ ಕ್ರೂರ ಮೃಗಗಳು ತಮ್ಮ ತಮ್ಮ ಗವಿಗಳನ್ನು ಸೇರತೊಡಗಿವೆ. ಶುಕಪಿಕಗಳು ಆನಂದದಿಂದ ಹಾರಾಡುತ್ತಲಿವೆ. ಗುಬ್ಬಿಗಳು

ಜಲಾಶಯದ ದಂಡೆಗೆ ಕುಳಿತು ಮೈ ತೊಳೆದುಕೊಳ್ಳುತ್ತವೆ. ಅಲ್ಲಲ್ಲಿ ಎಸೆವ ಹೊಂಡಗಳು, ಸರೋವರಗಳು, ಸುತ್ತಲೂ ಹಬ್ಬಿದ ಹೂವಿನ ಗಿಡಬಳ್ಳಿಗಳು ತಮ್ಮ ಸುಗಂಧ ಮಕರಂದವನ್ನು ಸರೋವರದಲ್ಲಿ ಸೂರೆ ಮಾಡುತ್ತಿವೆ. ನೀಲವರ್ಣದಂಬರವು ಸ್ವಚ್ಛವಾದ ನೀರಿನಲ್ಲಿ ಪ್ರತಿಬಿಂಬಿಸಿದೆ. ಅರೆಬೆಚ್ಚಗಾದ ನೀರು ಮುಂಜಾವಿನಲ್ಲಿ ಮನಸ್ಸಿಗೆ ಆನಂದವನ್ನುಂಟು ಮಾಡುವಂತಹದಾಗಿದೆ. ಸಂಧ್ಯಾಸಮಯ. ಸ್ನಾನೋಪಾಸನಕ್ಕೆಂದು ಬಂದ ಒಬ್ಬ ಸಾಧುಪುರುಷನು ತನ್ನ ಅನುಷ್ಠಾನಗಳನ್ನು ಮುಗಿಸಿಕೊಂಡು ಅಲ್ಲಿಯೇ ದಂಡೆಗಿರುವ ಗುಡಿಸಲಿಗೆ ಹೋಗಲುದ್ಯುಕ್ತನಾದನು. ಹೊರಳಿದನು. ಅದೇ ವೇಳೆಗೆ ಸೂರ್ಯನ ಪ್ರಥಮ ಕಿರಣಛಾಯೆಯು ಆಕಾಶದಲ್ಲಿ ಕಂಗೊಳಿಸಿತು. ಸರೋವರದ ನೀರು ಕಲಕಮಲಶವಾಗಹತ್ತಿತು. ಕುದಿಯುವ ನೀರಿನಂತೆ, ಸಮುದ್ರದ ತೆರೆಗಳಂತೆ, ಧಡಧಡ ಎಂಬ ಶಬ್ದಗಳು ಉಂಟಾಗುತ್ತಿದ್ದವು. ಯೋಗಿಯು ಅದನ್ನು ನೋಡಿ ಕಿರುನಗೆ ನಕ್ಕು, ಓಡಿಹೋಗಿ, ತನ್ನ ಗುಡಿಸಲಿನಲ್ಲಿ ಕೃತಕಯೋಗಾರೂಢನಾಗಿ ಕುಳಿತುಕೊಂಡನು.

ಇತ್ತ ಸರೋವರದ ನೀರು ಭರಾಟೆಯಿಂದ ಕಲಕುತ್ತಿದೆ. ನೀರು ಪುಟಿಪುಟಿದು ಬೀಳುವದು. ಕೆಲವು ನಿಮಿಷದ ತರುವಾಯು ಆನೆಗಡುತರವಾದ ಒಂದು ನೀರಿನ ತೆರೆಯು ಸರೋವರದ ಮಧ್ಯದಲ್ಲಿ ಎದ್ದಿತು. ಇಪ್ಪತ್ತು ಫೂಟು ಎತ್ತರ ಹಾರಿ ಒಡೆದು ಅತ್ತಿತ್ತ ಚೆಲ್ಲಾಪಿಲ್ಲಿಯಾಯಿತು. ಅದರೊಳಗಿಂದ ಸಪ್ರನೆ ಸವಾರನು ತನ್ನ ಕುದುರೆಯೊಡನೆ ಹೊರಬಿದ್ದನು. ಈಗ ಸಂಪೂರ್ಣ ಸೂರ್ಯೋದಯವಾಯಿತು. ಸುತ್ತಲೂ ಮೌನ ವಾತಾವರಣವುಂಟಾಯಿತು. ಗುಬ್ಬಿ ಕಾಗೆಗಳು ತಮ್ಮ ದನಿಯನ್ನು ನಿಲ್ಲಿಸಿದವು. ಗಿಡಗಳು ಕೂಡ ಅಲುಗದಾದವು. ವನದೊಳಗೆಲ್ಲ ಸದ್ದು. ಒಂದು ಹುಳದ ಪಿಟ್ಟೆಂಬ ಶಬ್ದವು ಕೂಡ ಇಲ್ಲ. ವನದ ಭವ್ಯತೆಯನ್ನೂ ಮೌನಮುಖ ಮುದ್ರೆಯನ್ನೂ ನೋಡಿ ಸವಾರನು ಬೆರಗಾದನು. ಕುದುರೆಯನ್ನು ಒಂದು ಗಿಡಕ್ಕೆ ಕಟ್ಟಿ, ಅಲ್ಲಿಯೇ ಬೆಳೆದ ಎಳೆಹುಲ್ಲನ್ನು ಕಿತ್ತಿ ತಂದು ಅದರ ಮುಂದೆ ಚೆಲ್ಲಿದನು. ವನದ ಸೌಂದರ್ಯವನ್ನೂ ಎತ್ತರವಾಗಿ ಬೆಳೆದ ಮರಗಳನ್ನೂ ಆಶ್ಚರ್ಯದಿಂದ ನೋಡತೊಡಗಿದನು. “ಮುನಿಯು ಸೂಚಿ

ಸಿದ ಗಂಧ್ವರವು ಇಲ್ಲಿಯೇ ಇರಬಹುದೇ? ಇಂತಹ ಭಯಂಕರವಾದ ಅಡವಿಯಲ್ಲಿ ಅದನ್ನು ಹುಡುಕುವ ಬಗೆ ಹೇಗೆ? ಆಕಾಶಮಾರ್ಗವಾಗಿಯೇ ಬಂದು ಅದನ್ನು ಗುರ್ತಿಸಬೇಕಾಗಿತ್ತು! ಇರಲಿ, ಈಗ ಮುಂದೇನು ಮಾಡುವದು?" ಎಂದು ವಿಚಾರಕ್ಕೊಳಗಾದನು. ಕುದುರೆಯ ಕಡೆಗೆ ನೋಡಿದನು. ಕುದುರೆಯು ಕಾಣಿಸಲಿಲ್ಲ. ಗಾಬರಿಯಾದನು. ಮುಂದೊಗೆದ ಹುಲ್ಲಿನ ಗುರುತು ಸಹ ಇದ್ದಿಲ್ಲ. ಅದನ್ನು ಹುಡುಕುವದಕ್ಕೆ ಎರಡು ಹೆಜ್ಜೆ ಮುಂದೆ ನಡೆದನು. ಎದುರಿಗೆ ಒಂದು ಗುಡಿಸಲು ಕಂಡಿತು. ಮತ್ತಿಷ್ಟು ಆಶ್ಚರ್ಯಚಕಿತನಾದನು. 'ಇಲ್ಲಿ ಯಾವ ಋಷಿಗಳಿರುವರೋ? ಹಾದಿ ತಪ್ಪಿ ಬೇರೆ ಸ್ಥಾನಕ್ಕೆ ಬಂದೆನೋ? ಅಥವಾ ಮುನಿಗಳು ತಮ್ಮ ಹದ್ದಿನೊಳಗೆ ಬಂದುದಕ್ಕಾಗಿ ನನ್ನ ಕುದುರೆಯನ್ನು ಹೊಡೆದೋಡಿಸಿದರೋ? ತಮ್ಮ ತಪಃಪ್ರಭಾವದಿಂದ ಅದನ್ನು ಅಡಗಿಸಿದರೋ? ಇನ್ನೇನು ಗತಿ? ಹೇಗೆ ಮಾಡಲಿ? ಹಾರಿಹೋಗಬೇಕೆಂದರೆ ಕುದುರೆಯೂ ಇಲ್ಲ—' ಎಂದು ಚಿಂತಿಸಿ ತನ್ನ ಗುರುವನ್ನು ಧ್ಯಾನಿಸಿ, ಆ ಗುಡಿಸಲಿನಲ್ಲಿದ್ದ ಮುನಿಗೇ ಶರಣು ಹೋಗಬೇಕೆಂದು ಯೋಚಿಸಿ, ಗುಡಿಸಲದೊಳಹೊಕ್ಕನು. ಪದ್ಮಾಸನಸ್ಥನಾಗಿ ಮೌನ ಮುಖಮುದ್ರೆಯಲ್ಲಿ ಒಬ್ಬ ಸಾಧುಪುರುಷನು ಕಣ್ಣು ಮುಚ್ಚಿಕೊಂಡು ಏನನ್ನೋ ಧ್ಯಾನಿಸುವವನಂತೆ ಕುಳಿತಿದ್ದನು. ಸವಾರನು ಸಾಷ್ಟಾಂಗ ನಮಸ್ಕಾರ ಮಾಡಿದನು. ಸಾಧುವು ಮೆಲ್ಲನೆ ಕಣ್ದೆರೆದು 'ತಥಾಸ್ತು' ಎಂದು ಮನದಲ್ಲಿ ಹರಸಿ, "ನೀನು ಯಾರು? ಇಲ್ಲಿಗೇಕೆ ಬಂದೆ?" ಎಂದು ವಿಚಾರಿಸಿದನು.

ಸವಾರನು:—"ಇಲ್ಲ ಸ್ವಾಮಿ, ತಿರುಗಿ ಹೋಗಬೇಕೆನ್ನುತ್ತೇನೆ ಆದರೆ ನನ್ನ ಕುದುರೆಯು ಒಂದೇ ನಿಮಿಷದಲ್ಲಿ ಮಾಯವಾಯಿತು. ಅದು ಇರುವ ಸ್ಥಾನವನ್ನು ದಯಮಾಡಿ ತಿಳಿಸಿದರೆ, ನನ್ನ ಮೇಲೆ ಬಹಳೇ ಉಪಕಾರ ಮಾಡಿದಂತಾಗುವದು" ಎಂದು ಬೇಡಿಕೊಂಡನು.

ಮುನಿಯು:—"ನಿನ್ನ ಕುದುರೆಯನ್ನು ನಾವು ಕಂಡಿಲ್ಲ. ಅದು ನಿನಗೆ ಸಿಗುವಂತಿಲ್ಲ. ಆದರೂ, ಹೀಗೆ ನಮ್ಮ ಗುಡಿಸಲದ ಹಿಂದಿನ ಮಾರ್ಗವಾಗಿ ಹೋಗು. ತಿರುಗಿ ನೋಡಬೇಡ. ಅಂದರೆ ನಿನಗೆ ಕುದುರೆ ಸಿಗಬಹುದು. ಮುಂದೆ ದೂರದಲ್ಲಿ ಒಂದು ಗಂಧ್ವರವುಂಟು. ಅಲ್ಲಿ ನಿನ್ನ

ಕುದುರೆಯು ಶೂಲಕ್ಕೆ ಸಿಕ್ಕಿರುವದು. ಅಲ್ಲಿಗೆ ಹೋಗಿ ನಿನ್ನ ಕುದುರೆಯನ್ನು ಬಿಡಿಸಿಕೊ. ಹಿಂದೆ ನೋಡಬೇಡ" ಎಂದು ಹೇಳಿ ಪುನಃ ಧ್ಯಾನಸ್ಥನಾಗಿ ಕುಳಿತನು.

ಸವಾರನು ಮತ್ತೊಮ್ಮೆ ನಮಸ್ಕರಿಸಿ, ಸಾಧುವು ಹೇಳಿದ ಮಾರ್ಗವಾಗಿ ವಿಚಾರಿಸುತ್ತ ನಡೆದನು. 'ಹಾ! ಇಲ್ಲಿಯೇ ಇದೆ. ಇಲ್ಲಿಯೇ ಇದೆ. ನಾನು ಬಂದದ್ದು ಸರಿಯಾಯಿತು. ಸಂಜೆಯಾಗುವದರೊಳಗೇ ಕೆಲಸ ತೀರಿಸಿಕೊಂಡು, ಬಂದ ಮಾರ್ಗವಾಗಿ ತಿರುಗಿ ಗುರುವಿನೆಡೆಗೆ ಹೋಗಬೇಕೆಂದು' ವಿಚಾರಿಸುವಲ್ಲಿ ಎದುರಿಗೊಂದು ಮರಕ್ಕೆ ಹಾಯ್ದನು. ಆಗ ಎಚ್ಚತ್ತು, ಕೈಯೊಳಗೆ ಖಡ್ಗವನ್ನು ಹಿಡಿದುಕೊಂಡು ನಡೆದನು. ಮುಂದೆ ಮತ್ತೊಂದು ಮರಕ್ಕೆ ಹಾಯ್ದನು. ಅದನ್ನು ಕತ್ತಿಯು ಬಂದೇ ಹೊಡತದಿಂದ ಕೆಡವಿದನು. ಮುಂದೆ ಮತ್ತೊಂದು ಮರವು ಅಡ್ಡವಾಯಿತು. ಸವಾರನು ಕೋಪಗೊಂಡು, ಪ್ರತಿ ಹೆಜ್ಜೆಗೊಂದು ಮರವು ಅಡ್ಡವಾಗುತ್ತಿದ್ದುದನ್ನು ಅರಿತು, ಒಮ್ಮೆ ತನ್ನ ಖಡ್ಗವನ್ನು ಸುತ್ತಲೂ ಬೀಸಿದನು. ಉದ್ದವಾಗಿ ಬೆಳೆದ ಮರಗಳೆಲ್ಲ ಬಿದ್ದುಹೋದವು. ಹಾಗೆಯೇ ಖಡ್ಗವನ್ನು ತಿರುಹುತ್ತ ಮುಂದಕ್ಕೆ ಸಾಗಿದನು. ದಾರಿಯು ಸರಳವಾಯಿತು. ದಟ್ಟಾಗಿದ್ದ ಅಡವಿಯೆಲ್ಲ ಬಂದೇ ನಿಮಿಷದಲ್ಲಿ ಬಯಲಾಯಿತು. ಮಧ್ಯದಲ್ಲಿದ್ದ ಗಂವ್ಹರವು ಕಣ್ಗೋಚರವಾಯಿತು. ತನ್ನ ಕುದುರೆಯು ಕಾಣಿಸಿತು. ಅದರ ಹಿಂದಿನ ಕಾಲನ್ನು ನಾಯಿಯು ತನ್ನ ಶೂಲದ ಹಲ್ಲುಗಳಿಂದ ಒಳ್ಳೇ ಗಟ್ಟಿಯಾಗಿ ಹಿಡಿದಿತ್ತು. ಕಾಲೊಳಗಿಂದ ರಕ್ತವು ಸೋರುತ್ತಿತ್ತು. ಕುದುರೆಯು ಸವಾರನನ್ನು ಕಂಡು ಒಮ್ಮೆ ಗಟ್ಟಿಯಾಗಿ ಒದರಿತು. ಕುದುರೆಯ ಕಾಲನ್ನು ಬಿಡಲು ನಾಯಿಗೆ ಸಾಧ್ಯವಾಗಿದ್ದಿಲ್ಲ. ಸವಾರನನ್ನು ಕಂಡು ನಾಯಿಯು ಚಡಪಡಿಸುತ್ತಿತ್ತು. ಏನು ಮಾಡಿದರೂ ಕುದುರೆಯ ಕಾಲಿನಿಂದ ತನ್ನ ಶೂಲಗಳನ್ನು ಹಿರಿದುಕೊಳ್ಳಲು ಅದು ಸಮರ್ಥವಾಗಲಿಲ್ಲ. ಸವಾರನು ಸುರಕ್ಷಿತವಾಗಿ ಕುದುರೆಯ ಹತ್ತಿರ ಬಂದನು. ಕುದುರೆಯು ಕಾಲನ್ನು ಕೆದರಿತು. ಸವಾರನಿಗೆ ಮುನಿಯ ವಚನವು ಒಮ್ಮೆಲೇ ಹೊಳೆಯಿತು. ಆಕ್ಷಣವೇ ತನ್ನ ಕತ್ತಿಯಿಂದ ನಾಯಿಯ ಬಾಲವನ್ನು ಬಂದೇ ಹೊಡತದಿಂದ ಕತ್ತರಿಸಿದನು.

ನಾಯಿಯು ಪ್ರಾಣಬಿಟ್ಟಿತು. ತುಂಡಾಗಿ ಬಿದ್ದ ಬಾಲವು, ಸರ್ಪರೂಪವಾಗಿ ಬೆಳೆದು ಗಂಧ್ವರಕ್ಕೆ ಸುತ್ತಿಕೊಂಡಿತು. ಅದನ್ನು ಕಂಡು ಸವಾರನು ಆ ಕಾಳಸರ್ಪದ ಹೆಡೆಯನ್ನು ಕತ್ತರಿಸಿ ಒಗೆದನು. ಆ ಹೆಡೆಯು ಹಾರಿ ಬಂದು ಸವಾರನ ಕೊರಳೊಳಗಿದ್ದ ಒಂದು ರುದ್ರಾಕ್ಷಿಯನ್ನು ಕಚ್ಚಿ ಕೊಂಡು ಮೇಲಕ್ಕೆ ಹಾರಿ ಹೋಗಿ ಅದೃಶ್ಯವಾಯಿತು. ಸವಾರನ ಕೊರ ಳಲ್ಲಿ ಇನ್ನೊಂದು ರುದ್ರಾಕ್ಷಿ ಉಳಿಯಿತು. ಅದನ್ನು ತೆಗೆದು ಗಂಧ್ವರಕ್ಕೆ ಒಗೆದನು. ದೊಡ್ಡ ದೊಡ್ಡ ಕಲ್ಲು ಬಂಡೆಗಳು ಪುಡಿಪುಡಿಯಾಗಿ ಬೀಳ ಲಾರಂಭಿಸಿದವು. ಅದ್ಭುತವಾದ ಗಂಧ್ವರವು ನಿರ್ನಾಮವಾಯಿತು. ಕಲ್ಲು ಗಳೆಲ್ಲ ಮಣ್ಣುಪುಡಿಯಾಗಿ ಬಿದ್ದವು. ಕುದುರೆಯು ಆ ಮಣ್ಣು ಗುಂಪನ್ನು ಕಾಲಿನಿಂದ ಕೆದರಿ ತೆಗೆಯಿತು. ಮಧ್ಯದಲ್ಲಿ ಒಂದು ಭವ್ಯವಾದ ಸುವರ್ಣ ಪಾತ್ರೆಯು ಕಾಣಿಸಿತು. ಅದರ ಪ್ರಕಾಶದಿಂದ ಸೂರ್ಯನ ಪ್ರಕಾಶವು ಕುಗ್ಗಿತು. ಸವಾರನ ಕಣ್ಣುಗಳು ಕಾಣದಂತಾದವು. ದೇವದುಂದುಭಿ ಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ಅಷ್ಟರಲ್ಲಿ ಕುದುರೆಯು ಬಂಗಾರದ ಕೊಡವನ್ನು ತನ್ನ ಹೊಟ್ಟೆಯಲ್ಲಿ ಅಡಗಿಸಿಟ್ಟುಕೊಂಡು, ಸವಾರನನ್ನು ತನ್ನ ಮೇಲೆ ಕುಳ್ಳಿರಿಸಿಕೊಂಡು ಗಗನಮಾರ್ಗವಾಗಿ ಸಾಗಿತು. ಇತ್ತ ಗುಡಿಸಲದೊಳಗಿನ ಸಾಧುವು ಮಾಯವಾದನು. ಗುಡಿ ಸಲವು ಇಲ್ಲದಂತಾಯಿತು. ಸರೋವರವು ಬತ್ತಿತು. ಅರಣ್ಯವೆಲ್ಲ ಹಾಳಾ ಯಿತು. ಅರಣ್ಯದೊಳಗೆ ಸರ್ವ ಪ್ರಾಣಿವರ್ಗಕ್ಕೆ ಬರಹೋಗಲು ಅನು ಕೂಲವಾಯಿತು. ಆದರೆ ಮುಗಿಲಲ್ಲಿ ಹಾರಿಹೋಗುತ್ತಿದ್ದ ಸವಾರನನ್ನು ಕಂಡು ಅನೇಕರು ಅವನನ್ನು ತಡೆಯಬೇಕೆಂದು ಯೋಚಿಸಿ ಅನೇಕ ಸಾಧನೆಗಳಿಂದ ಪ್ರಯತ್ನ ಮಾಡತೊಡಗಿದರು.



೮

ಇತ್ತ ! ಕಲ್ಲ, ಮಲ್ಲ, ನಿಂಗ ಅವರು ಅಜ್ಜನ ದಾರೀ ನೋಡುತ್ತ ಗುಡಿಸಲದ ಮುಂದೆ ಬಿಸಿಲಿನಲ್ಲಿ ಕುಳಿತಿದ್ದರು. ಎರಡು ಸಂತೆ ಕಳೆದು ಹೋದರೂ ಅಜ್ಜನು ಇನ್ನೂ ಬಂದಿರಲಿಲ್ಲ. ಸಂಸಾರಕ್ಕೆ ಅಡಚಣಿ ಬಹಳೇ ಉಂಟಾಗಿತ್ತು. ಹೊಲದಲ್ಲಿಯ ಹತ್ತೀಕಟಿಗೆ, ಕೋಲಿ ಮುಂತಾದವುಗಳು ಹಾಗೆಯೇ ನಿಂತಿದ್ದವು. ದನಕರುಗಳು ಸಾಹುಕಾರರ ಮನೆಯಲ್ಲಿ ಮೇಯುತ್ತಿದ್ದವು. ಹೊಸದಾಗಿ ಹೊರಬಿದ್ದವರಲ್ಲಿ ಅವರ ಹೆಂಡರು ಮಕ್ಕಳುಗಳಿಗೆ ಭಿಕ್ಷೆಯುಪಾತ್ರೆಯು ದೊರಕಿತ್ತು. ಹಾಗೂ ಹೀಗೂ ಮಾಡಿ ಅರೆಹೊಟ್ಟೆ ಹೊರೆದುಕೊಳ್ಳುವ ಮಹಾ ಯೋಗವು ಕಲ್ಲ ಮಲ್ಲರವರಿಗೆ ಒದಗಿಬಂದಿತ್ತು. ಅಜ್ಜನ ದಾರಿ ನೋಡಿ ನೋಡಿ ಬೇಸತ್ತಿದ್ದರು. ಅಜ್ಜನು ಬಂಗಾರ ತರುವದು ಒತ್ತಟ್ಟಿಗಿರಲಿ, ಅವನು ಹೋದಂದಿನಿಂದ ಮಹಾನ ವಮಿಯ ಬಂಗಾರ ಸಿಗುವದು ಪರಾಕಷ್ಟವಾಗಿತ್ತು. ಎಲ್ಲಿಯಾದರೂ ಕೂಲಿ ಮಾಡಿ ಎರಡು ದುಡ್ಡು ದೊರಕಿಸಬೇಕೆಂದರೆ, ಕೂಲೀ ಮಾಡಿಸುವವರಿಲ್ಲ. ದೊಡ್ಡ ಊರೊಳಗಂತೂ ಅದೇ ಎರಡು ದುಡ್ಡು ಸಿಂಗಲ್ ಚಹಾಕ್ಕೆ ಆಗುತ್ತದೆಂದು ಕೂಲಿ ಕೊಡುತ್ತಿದ್ದಿಲ್ಲ. ಈ ರೀತಿ ಸರ್ವತೋಮುಖಿ ಯಾಗಿ ಮಲ್ಲರ ಬಾಳ್ವೆ ಬಾಳ್ವೆಗೇಡಾಗಿತ್ತು ! ಮಾಡುವದೇನು ? ಅಜ್ಜನ ಮಾರ್ಗ ನಿರೀಕ್ಷಣ ಒಂದೇ ! ಅವನು ಬಂದ ಕೂಡಲೇ ಮನೆಯ ಆರಭಾರ ವನ್ನೆಲ್ಲ ಆ ಮುದುಕನಿಗೆ ಒಪ್ಪಿಸಿ, ತಾವೆಲ್ಲಿಯಾದರೂ ಗಿರಣಿ ಮುಂತಾದ ಯಂತ್ರಾಲಯದಲ್ಲಿ ಧುಮುಕಬೇಕೆಂದು ಯೋಚಿಸಿದ್ದರು. ಪಾಪ ! ಅಜ್ಜನು ಬಂಗಾರ ತರುತ್ತಾನೆಂಬದು ಅವರಿಗೆ ಗೊತ್ತಿರಲಿಲ್ಲ. ಸುಖದ ಕಾಲವು ಒದಗಿ ಬರುವದೆಂಬದನ್ನು ಅವರು ಕನಸುಮನಸ್ಸಿನಲ್ಲಿಯೂ ತಿಳಿದಿರಲಿಲ್ಲ. 'ರಾಗೀ ಬೀಸುವದು ತಪ್ಪಿಲ್ಲ'ವೆಂಬ ಶಾಸ್ತ್ರವೇ ಅವರಿಗೆ ವೇದವಾಕ್ಯವಾಗಿತ್ತು. ಹೆಗಲಮೇಲಿನ ಕುಳೇದ ಬಾರು ಕೆಳಗೆ ಬೀಳದ ಹೊರ್ತು ಮನೆ ಮುಟ್ಟದೆವೆಂದು ತಿಳಿಯುವದು ಅವರಿಗೆ ಅಸಾಧ್ಯ, ಕಲ್ಪನಾತೀತವಾದ ಮಾತಾಗಿತ್ತು. ಇರಲಿ ! ಅಜ್ಜನು ತಿರುಗಿ ಬರುವ ಸಂಭವವಿಲ್ಲ. ಅವನಿಗೇನಾದರೂ ಅಪಘಾತ ಉಂಟಾಗಿರಲಿಕ್ಕೇಬೇಕು. ಜಾತ್ರೆ ಮುಗಿದು ಹಳೆಯ ಮಾತಾಯಿತು. ಇನ್ನೂ ಬರಲಿಲ್ಲ. ಅಂದ

ಮೇಲೆ ಅಜ್ಜನ ಆಶೆ ತಪ್ಪಿದಂತಾಯಿತು. ಬೆಂಡು ಬೆತ್ತಾಸದ ಅಂಗಡಿಗಳು ಕೂಡ ತಿರುಗಿ ಬಂದವು. 'ಇನ್ನು ಇಲ್ಲಿ ಇರುವದು ಸರಿಯಲ್ಲ. ಗುಡ ಚಾಪಿ ಕಿತ್ತಿ ಗುಳೇ ಕಟ್ಟಿಕೊಂಡು ಎತ್ತಾಗಾದರೂ ಸುಡುಗಾಡಕ್ಕೆ ಹೋಗೋಣ' ಎಂದು ಕಲ್ಲಸು ಗುಸುಗುಟ್ಟುತ್ತಿದ್ದನು. ಮಲ್ಲ, ನಿಂಗ ಅವರು ಕೆಳಗೆ ಮೋರೆ ಮಾಡಿಕೊಂಡು ನೆಲವನ್ನು ಕುಕ್ಕುತ್ತ ಕುಳಿತಿದ್ದರು. 'ಮುಂದಿನ ವಿಚಾರ ಒತ್ತಟ್ಟಿಗಿರಲಿ, ಈಗ ಮಧ್ಯಾಹ್ನಕ್ಕೆ ಕೂಳಿಲ್ಲ, ಅದರ ವಿಚಾರವೇನು ?' ಎಂದು ನಿಂಗ್ಯಾ ಮೆಲ್ಲಗೆ ನುಡಿದನು.

ಕಲ್ಲ:— 'ಆ ಹೊಸ ಪಟ್ಟಣಕ್ಕಾದರೂ ಹೋಗಿ ಪತ್ರೋಳಿ ಹುಡುಕೋಣ ನಡೆಯಿರಿ. ಸಿಕ್ಕಷ್ಟು ಸಿಕ್ಕಿತು. ಸುಗ್ಗಿಕಾಯಿ ಸಿಪ್ಪೆ, ಬದನಿಕಾಯಿ ತುಂಬಾರ ಸಿಗತಾವ. ಏಳ್ರಿ ಹೋಗೋಣ. ಇನ್ಯಾಕ ತಡ? ಗುಡಿಸಲದ ಆಶೆ ಬಿಡ್ರಿ. ಆಶೆ ಮಹಾ ಕೆಟ್ಟ ನಿಮಗೊತ್ತಿಲ್ಲೇ? ಬಗವಂತ ಬೊಗಳ್ಯಾನ. 'ಆಸೆಯನುಳಿಯೆ ಲೇಸಕ್ಕುಂ' ಅಂತ.

ನಿಂಗ:— 'ಎಲ್ಲಾ ಗೊತ್ತದ ಬಿಡೋ, ಇಂತಾ ವೇದಾಂತ ನಮ್ಮುಂದ ಹೇಳಬ್ಯಾಡ. ಆ ಬುದ್ದಿಗೇಡಿ ಬಗವಂತಗೇನು ಗೊತ್ತು. ಬರೇ ಬೊಗಳ್ಯಾನ ತೀರಿತು. ಯಾರೂ ಕಲ್ಲೊಗಿದಿಲ್ಲವಗ, ಅದಕ್ಕ ಬಿಟ್ಟಾನ ಬಾಯಿಗೆ ಬಂದ್ಹಂಗ ಬೊಗಳೋದ್ನ ?'

ಕಲ್ಲ:— 'ಮುಂದೇನ ಮಾಡಬೇಕಂತೀರಿ? ಮಾಡ್ರಿಪಾ! ನಾ ಹೊರೆಟೆ' ಎಂದು ಹೇಳಿ ಚಟಕ್ಕನೆ ಎದ್ದು ಆ ದೊಡ್ಡ ಹೊಸ ಊರಿನ ಕಡೆಗೆ ನೋಡುತ್ತ ನಿಂತನು. ಅಷ್ಟರಲ್ಲಿ ಅತ್ತ ಕಡೆಯಿಂದ ಬಸ್ಯಾ ಬಂದನು.

ಬಸ್ಯಾ:— ಕಲ್ಲ, ಎಜ್ಜ ಬಂದಾನೇನಿಲ್ಲಿ ?

ಕಲ್ಲ:— ಹೂ ಬಂದಾನ! ಹಳ್ಳದ ದಂಡಿ ಹಿಡಿದ್ಹೋಗ್ಯಾನ.

ಬ:— ಅದಕ್ಕ ಅಂದೆ! ಆ ಹೊಸೂರ ವ್ಯಾಗ ನಾಳೆ ಒಬ್ಬ ದೊಡ್ಡ ಕುದುರೆ ಸವಾರ ಹಾಯ್ದು ಹೋಗತಾನಂತೆ. ಅದಕ್ಕ ನಮ್ಮಜ್ಜ ಬಂದಾನೇನಂತ ಕೇಳ್ದೆ. ನಾಳೆ ಎಲ್ಲರಿಗೂ ಊಟ ಅಂತ ಅಲ್ಲಿ. ಇವತ್ತು ಬಡಬಗ್ಗರಿಗೆ ಊಟ ಮಾಡಿಸ್ಯಾರ! ನಡ್ರಿ! ಹುಡುಗರೂ ಅವರ್ನ ಅಲ್ಲಿಯೇ ಉಣ್ಣಾಕ ಕುಂದ್ರಿಸಿ ಬಂದೇನ. ನಾವೂ ಹೋಗೋಣ! ಇವತ್ತು, ನಾಳೆ,

ಅಲ್ಲಿಯೇ ಇದ್ದು ಸವಾರನನ್ನು ನೋಡಿ, ಏನೇನ ಕತಿಯಾಗತ್ತೈತಿ ಎಲ್ಲಾ ಕೇಳಿಕೊಂಡು ಎಜ್ಜ ಅವನ ಸಂಗಾತ ಬಂದಿದ್ರ ಕರಕೊಂಡ ಬರೋಣ ಸಂಜಿಗೆ. ಅನಕಾತ ಗುಡಿಸಲ ಹಂಗಾ ಇರಲಿ. ಹಿಂದುಗಡಸೇಕ ಕಿತ್ತೋಣಂತ!'

(ಎಂದು ಸೌಮ್ಯವಾಗಿ ಸೂಚಿಸಿದನು. ಎಲ್ಲರೂ ಅದಕ್ಕೆ ತಮ್ಮ ಮೌನದಿಂದ ಒಪ್ಪಿಗೆ ಕೊಟ್ಟು ಆ ಹೊಸೂರ ಕಡೆಗೆ ನಡೆದರು; ತಮ್ಮ ಕಂಬಳಿ ಕೋಲು ತೆಗೆದುಕೊಂಡು.)

---

೬

ಹೊಸದಾಗಿ ಹುಟ್ಟಿದ ಪಟ್ಟಣ. ಹೊಸ ಕಾಲದ ಹೊಸ ಮಾದರಿಯ ಹೊಸ ಹೊಸ ಕಟ್ಟಡಗಳ ಶೋಭೆ. ಎತ್ತರವಾದ ಮನೆಗಳು. ಸಾಲಾಗಿ ಕಟ್ಟಿದ ಅಂಗಡಿಗಳು ಕಲ್ಲಿನ ತಳಹದಿಯ ಮೇಲೆ ನಿಂತಿದ್ದವು. ಮನೋ ವಿಕಾರಗಳು ಬರಹೋಗಲು ಅಲ್ಲಲ್ಲಿ ನಿರ್ಮಿತವಾದ ತೋಟಗಳು, ಬೈಲು ಗಳು, ಇಂದ್ರಭುವನವನ್ನು ಹಿಯಾಳಿಸುವಂತಹ ಜಗಜಗಿಪ ಪಟ್ಟಣವು. ಪಂಚರಂಗೀ ಪಾತರಗಿತ್ತಿಗಳು, ತ್ರಿರಂಗೀ ತಾಮ್ರಪಟಗಳು ಊರ ತುಂಬ ಹಾರಾಡುತ್ತಿದ್ದವು. ಸಂದಿ ಸಂದಿಗೂ ಕೂಟ ಕೂಟಿಗೂ ಅಮಾನುಷ ಗಾಯನ, ವಿಲಾಸೀ ಕೃಷ್ಣನ ಸಾಕ್ಷಾತ್ಕಾರ ಮೊದಲಾದ ಸಾಧನಗಳಿಂದ ಜನರಿಗೆ ಮೋಕ್ಷಪದವಿಯನ್ನು ಒದಗಿಸಿಕೊಟ್ಟು, ತಲೆಯ ಮೇಲೆ ಗುಂಡಾ ಡಿಸುವದು ಈ ಹೊಸೂರಿನ ಮುಖ್ಯ ಧ್ಯೇಯ. ಅದರಲ್ಲಿಯೇ ಅದಕ್ಕೆ ಹೆಚ್ಚಾಗಿ ಪ್ರವೀಣತೆ. ಪರಸ್ಥಳದವರಿಗಂತೂ ಒಳ್ಳೇ ಆದರದಿಂದ ಮೋಕ್ಷ ವನ್ನು ಮೊದಲು ಕೊಡುವ ಯೋಚನೆಯನ್ನು ಈ ಊರವರು ಚೆನ್ನಾಗಿ ಅರಿ ತಿದ್ದರು. ಇಂತಹ ಧಾರ್ಮಿಕ, ಸಾಮಾಜಿಕ ಕೆಲಸಗಳಲ್ಲಿ ಅವರಿಗೆ ಪ್ರೀತಿ ಹೆಚ್ಚು. ಒಳ್ಳೇ ಹೆಮ್ಮೆಯಿಂದ ಸ್ವದೇಶ, ಸ್ವಜನಾಭಿಮಾನದಿಂದ ಕೆಲಸ ಮಾಡುವರು. ಇಂತಹ ಊರೊಳಗೆ ಇವತ್ತು ಒಂದು ಪ್ರಚಂಡಪೂರ್ವ ಸಭೆಯಾಗುವದಿತ್ತು. ಪರಸ್ಥಳದವರಿಗೆ ಊಟದ ವ್ಯವಸ್ಥೆ, ಇಳಿದುಕೊಳ್ಳ ಲಿಕ್ಕೆ ಮನೆ ಮುಂತಾದವುಗಳ ವ್ಯವಸ್ಥೆಯನ್ನು ಈ ಮೊದಲೇ ಸಿದ್ಧಗೊಳಿ

ಸಿದ್ಧರು. ಸಂಸಾರದ ಬಲಿಗೆ ಸಿಕ್ಕು, ತೊಳಲಿ ಬಳಲಿ ಹಣ್ಣಾಗುತ್ತಿರುವ ನರರ ಪಾಪಗಳನ್ನೆಲ್ಲ ವಾಕ್ಸಾನದಿಂದ ಕಳೆದು, ಶುಭ್ರ ವಸ್ತ್ರವನ್ನುಡಿಸಿ, 'ಮೋಕ್ಷ'ವೆಂಬ ಉಚ್ಚ ಪದವಿಯನ್ನು ಸುಲಭರೀತಿಯಿಂದ ಒದಗಿಸಿಕೊಡುವದೇ ಆ ಸಭೆಯ ಮುಖ್ಯ ಉದ್ದೇಶವಾಗಿತ್ತು. ಆದ್ದರಿಂದ ಸಕಲ ಪ್ರಾಣಿವರ್ಗಕ್ಕೂ ಆಮಂತ್ರಣ ಕೊಟ್ಟಿದ್ದರು. ಎಲ್ಲರೂ ಮಧ್ಯಾಹ್ನಕ್ಕೆ ಊರೊಳಗೆ ಕಲೆತರು. ಸೂರ್ಯಾಸ್ತಕ್ಕೆ ಎರಡು ತಾಸು ವೇಳೆ ಉಳಿದಿರುವ ಸಮಯಕ್ಕೆ ಸಭೆ ಸೇರುವದೆಂಬ ಸೂಚನೆಯಿತ್ತು. ಆದರೆ ಸಭಾಧಿಪತಿಗಳು ಇನ್ನೂ ಬಂದಿರಲಿಲ್ಲ. ಮುಂದೆ ಒಂದು ತಾಸು ತಡವಾಡಿ ಬಂದರು. ಕಾರ್ಯದರ್ಶಿಗಳು ಸಭಾಧಿಪತಿಗಳ ಕಿವಿ ಊದಿದರು. ಅದಕ್ಕೆ ಅವರು ಗೋಣು ಹಾಕಿದರು. ಅಲ್ಲಲ್ಲಿ ಗುಸುಗುಸು ನಡೆದಿತ್ತು. ಸಭೆ ಸುರುವಾಯಿತು. ಸಭಾಪತಿಗಳು ಎದ್ದು (ತಾವಾಗಿಯೇ ಸಭೆಯ ಪತಿಗಳಾಗಿ ಹುಟ್ಟಿಬಂದಿದ್ದರು, ಆದ್ದರಿಂದ ಆ ಸ್ಥಾನಕ್ಕೆ ಸೂಚನೆ, ಅನುಮೋದನೆ ಬೇಕಾಗಿದ್ದಿಲ್ಲ.) "ಸಭ್ಯಗೃಹಸ್ಥರೇ!" ಹಿಂದಿನಿಂದ 'ಸದ್ದು' ಎಂಬ ಕೂಗು ಕೇಳಬಂತು— "ಮತ್ತು ನನ್ನ ಪ್ರಿಯ ಬಂಧು-ಭಗಿನಿಯರೇ" (ನಿಜವಾಗಿ ನೋಡಿದರೆ ಭಗಿನಿಯರು ಏಳೆಂಟು ಜನ ಅಲ್ಲಿಯೇ ಕುಳಿತಿದ್ದರು. ಬಂಧುಗಳು ಇನ್ನೂ ಯಾರೂ ಬಂದಿದ್ದಿಲ್ಲ. ಬಯಲೊಳಗೆ ಅಲ್ಲಲ್ಲಿ ಸಣ್ಣ ಸಣ್ಣ ಗುಂಪುಗಳು ಕಾಣಿಸುತ್ತಿದ್ದವು. ಅವುಗಳನ್ನೆಲ್ಲ ಕಿತ್ತುಕೊಂಡು ಸಭಾಪತಿಗಳ ಭಾಷಣ ಮರ್ಯಾದೆಯೊಳಗೆ ಕೂಡ್ರಿಸಬೇಕಾದರೆ ಮತ್ತೊಂದು ತಾಸು ಬೇಕಾಯಿತು. ಸಭಾಪತಿಗಳು ಮೊದಲಿನ ಎರಡು ಶಬ್ದಗಳನ್ನು ನುಡಿದು ಈ ಗದ್ದಲದಲ್ಲಿ ಹಾಗೆಯೇ ನಿಂತುಬಿಟ್ಟಿದ್ದರು. ಕೆಲವು ನಿಮಿಷಗಳು ಕಳೆದ ತರುವಾಯ ಭಾಷಣವು ಪುನಃ ಸುರುವಾಗಬೇಕೆನ್ನುವಷ್ಟರಲ್ಲಿ, ನಾಲ್ಕೂಕಡೆಯಿಂದ ಹಿಂಡುಗಟ್ಟಿ ಜನರು ಬಂದು ಮುಂದೆ ಮುಂದೆ ನುಗ್ಗಹತ್ತಿದರು. ಆಗ್ಗೆ ನಿಯಮಿತ ವೇಳೆ ಮೀರಿ ಎರಡು ತಾಸಾಗಿತ್ತು. ಕಾರ್ಯದರ್ಶಿಗಳ ಸೂಚನೆಯ ಮೇರೆಗೆ ಸಭಾಪತಿಗಳು ತಮ್ಮ ಭಾಷಣವನ್ನು ಪುನರುಚ್ಚಾರಣೆ ಮಾಡಿದರು.

"ಬಂಧು-ಭಗಿನಿಯರೇ! ಇವತ್ತು ನಾವು ಇಲ್ಲಿ ಏಕೆ ಸಭಾ ಕರೆದಿದ್ದೇವೆ ಎಂಬದು ತಮಗೆ ಈ ಮೊದಲೇ ಹಸ್ತಪತ್ರಿಕೆಗಳಿಂದ ತಿಳಿದಿದೆ;

ಅಂತ ನಾ ತಿಳಕೊಳ್ಳುತ್ತೇನೆ. ಈಗೇನದಲ್ಲಾ, ನಮ್ಮ ಮೇಲೆ ಏನು ಆಘಾತ ಬಂದೊದಗೇದ ಅದನ್ನ ನಾವು ಎಲ್ಲರೂ, ಶಕ್ತಿಮೀರಿ ಯತ್ನ ಮಾಡಿ ಪರಿಹರಿಸಿಕೊಳ್ಳಲಿಕ್ಕೆ ಬೇಕು. ಮುಖ್ಯವಾಗಿ ಇಲ್ಲೇನು ಬಂದಾರ ಪರ ಸ್ಥಳದಿಂದ, ಅವರ ದೆಸೆಯಿಂದ, ಈಗ, ಇಲ್ಲಿ, ನಾವೆಲ್ಲರೂ ಈ ಊರವರು ಕೂಡೇವಿ. ಚಂದ್ರನಿಗೆ ಗ್ರಹಣ ಹಿಡಿದಾಗ್ಗೆ, ಜನರು ಜಪತಪಗಳಿಂದ ಹೇಗೆ ಅವನಿಗೆ ಮೋಕ್ಷ ಕೊಡಿಸುತ್ತಾರೋ ಹಾಗೆಯೇ ನಾವು ಅವರಿಗೆ ಮೋಕ್ಷ ಕೊಡಲಿಕ್ಕೆ ಬೇಕು. ಇಲ್ಲದಿದ್ದರೆ ನಿರ್ವಾಹವಿಲ್ಲ. ನಮಗೆ ಸಿಗದಿದ್ದರೂ ಚಿಂತೆ ಇಲ್ಲ. ಅವರಿಗೆ ಮೊದಲು ಕೊಡಿಸಬೇಕು. ಅಂದರೆ ನಮಗೆ ಸುಖ. ಒಂದು ತರದ ಕಾಟ ತಪ್ಪಿದಂತಾಗುವದು. ಕಾರ್ಯ ದರ್ಶಿಗಳು ಹೇಳಿದ ಹಾಗೆ, ಈಗ ವೇಳೆ ಬಹಳಾಗಿದೆ. ಸ್ವಲ್ಪದರಲ್ಲಿಯೇ ಮುಗಿಸಿ ಬಿಡುತ್ತೇನೆ. ನನ್ನ ತರುವಾಯ ಇನ್ನೂ ಅನೇಕರು ಮಾತಾಡು ವವರಿದ್ದಾರೆ. ಆದ್ದರಿಂದ ನಾನು ತಮ್ಮ ವೇಳೆಯನ್ನು ಹೆಚ್ಚಿಗೆ ತೆಗೆದು ಕೊಳ್ಳದೆ ಒಂದೆರಡು ಮಾತು ಹೇಳಿ ನನ್ನ ಭಾಷಣ ಮುಗಿಸುತ್ತೇನೆ. ನಾನು ಈಗ ಸುತ್ತಲಿರುವ ಊರುಗಳಿಂದ ಬಂದವರಿಗೆ, ನಾನು ಇಷ್ಟೇ ಹೇಳತೇನೆ, ನಾಳೆ ಸವಾರನು ಬರುವನು; ಅವನ ಕುದುರೆಯೂ ಬರುವ ದಿದೆ. ಬಂದ ಮೇಲೆ ನಿಮಗೆಲ್ಲರಿಗೂ ಆ ಸವಾರನ ಹಸ್ತದಿಂದ ಬೇಕಾದ ದ್ದನ್ನು ಕೊಡಿಸುತ್ತೇವೆ. ಚಿಂತೆ ಬೇಡ. ಇನ್ನು ಮುಂದೆ ಈಗಿದ್ದಂತೆ ಇರುವದಿಲ್ಲ. ಇವತ್ತು ಇದ್ದದ್ದು ನಾಳೆ ಇಲ್ಲ. ಕಾಲಕಾಲಕ್ಕೆ ಕಾಲ ಬದಲಾಯಿಸುತ್ತಾ ಇರುತ್ತದೆ. ಮುಂದೆ ಇದಕ್ಕೂ ಹೆಚ್ಚಿಗೆ ಕಠಿನ ಕಾಲ ಬಂದೀತು, ನೋಡ್ರಿ! ಇಷ್ಟು ಹೇಳಿ ನಾನು ತಮ್ಮ ರಜೆ ತೆಗೆದು ಕೊಳ್ಳುತ್ತೇನೆ." ಎಂದು ಹೇಳಿ ಕುರ್ಚಿಯ ಮೇಲೆ ಕುಳಿತವರೇ ಮತ್ತೆ ಎದ್ದು, ಮುಂದೆ ಮೇಜಿನ ಮೇಲಿದ್ದ ಕಾಗದವನ್ನೋದಿ, 'ಈಗ ನಮ್ಮ ಪ್ರಸಿದ್ಧ ಮೋಕ್ಷದಾತರೂ, ಒಳ್ಳೇ ಹಸ್ತಗುಣವುಳ್ಳವರೂ, ಕಾಯಿದೆ ಪಂಡಿತರೂ ಆದಂಥ ಶ್ರೀಯುತ ಕೊಟ್ರೆ ಬೊಗಳಪ್ಪನವರು ಮಾತಾಡು ವರು' ಎಂದು ಸೂಚಿಸಿ ತಮ್ಮ ಸ್ಥಾನವನ್ನು ಸ್ವೀಕರಿಸಿದರು. ಆಮೇಲೆ ಎರಡು ನಿಮಿಷಗಳ ತರುವಾಯ ಹಿಂದಿನಿಂದ ಕೊಟ್ರೆರಾಯರು ಮುಂದೆ ಬಂದರು. ಕಣ್ಣೊಳಗಿನ ಚಷ್ಮಾ, ತಲೆಯೊಳಗಿನ ಕರೇ ಕೂದಲುಗಳು

ಅವರ ಶುಭ್ರ ವಸ್ತ್ರಕ್ಕೆ ಶಿಖರಗಳಾಗಿದ್ದವು. ಅತ್ತಿತ್ತ ನೋಡಿ, ಮೇಜಿನ ಮೇಲೆ ಬಲಗೈಯಿಟ್ಟು ಮಾತಾಡಲಸುವಾದರು—

'ಸಭ್ಯಗೃಹಸ್ಥರೆ! ಮತ್ತು ನನ್ನ ಅಕ್ಕತಂಗಿಯರೇ!! ನಾನು ಈಗ ತಮ್ಮ ಮುಂದೆ ನಾಲ್ಕು ಮಾತು ಇಡಬೇಕೆಂದು ತಮ್ಮ ಮುಂದೆ ಬಂದು ನಿಂತಿದ್ದೇನೆ. ಈಗ President-ಅಧ್ಯಕ್ಷರು ಹೇಳಿದ ಹಾಗೆ ನಾಳೆ ಸವಾರನು ಬರುತ್ತಾನೆ, ಸಂಜೆ ಐದು ಗಂಟೆಗೆ. ಆಗ್ಗೆ ತಾವೆಲ್ಲರೂ ವಿಶೇಷತಃ ಸಮೀಪದ ಊರವರು ತಪ್ಪದೇ ಸರಿಯಾದ ವೇಳೆಗೆ ಬಂದು, ಸವಾರನು ತಂದಂಥ ಮಹಾಪ್ರಸಾದವನ್ನು ನಿಮ್ಮೊಳಗೆ ಹಂಚಿಕೊಂಡು ಹೋಗಿರಿ ಅಂತ ಹೇಳಿ ನನ್ನ ಭಾಷಣ ಮುಗಿಸುತ್ತೇನೆ," ಹೀಗೆಂದು ಕುಳಿತವರು ಮತ್ತೆ ಎದ್ದು—'ಅಲ್ಲದೇ, ನಿಮ್ಮೆದುರಿಗೆ ಒಂದು ಠರಾವು ಇಡಬೇಕೆ'ಂದು ಕಾರ್ಯದರ್ಶಿಗಳು ಸೂಚಿಸಿದ್ದರಿಂದ ಅದನ್ನು ನಾನು ಓದುತ್ತೇನೆ— "ನಾವು ಈ ಹೊಸೂರಿನವರು ಸವಾರನಿಗೂ, ಅವನ ಕುದುರೆಗೂ ಯೋಗ್ಯ ಮಾನ್ಯ ಮಾಡಿ, ಅವರ ಯೋಗ್ಯ ವ್ಯವಸ್ಥೆಯನ್ನು ಸ್ವಸಂತೋಷದಿಂದ ಕೈಕೊಳ್ಳಲು ಸಿದ್ಧರಿದ್ದೇವ. ಮತ್ತು ಅವರ ಕಡೆಯಿಂದ ನಾವು ಏನನ್ನೂ ಬೇಡುವದಿಲ್ಲ. ಅವರಲ್ಲಿದ್ದ ಮಹಾಪ್ರಸಾದವನ್ನು, ಇಲ್ಲಿ ಬಂದವರು ತಮಗೆ ಇಷ್ಟವಿದ್ದಷ್ಟು ತಾವೇ ಸ್ವತಃ ಬಂದು ಒಯ್ಯುವದಕ್ಕೂ, ಸವಾರನ ಸಂಗಡ ಮಾತಾಡುವದಕ್ಕೂ, ಕುದುರೆಯ ಜವೆಗಳನ್ನು ತೆಗೆದುಕೊಳ್ಳುವದಕ್ಕೂ ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿದ್ದೇವೆ" ಎಂದು ಠರಾವನ್ನು ಓದಿ, 'ಈ ಠರಾವನ್ನು ನಿಮ್ಮ ಮುಂದೆ ಇಟ್ಟಿದ್ದೇನೆ. ತಾವೆಲ್ಲರೂ ಕೈತಟ್ಟಿ ಇದನ್ನು ಪಾಸ ಮಾಡುವಿರೆಂದು ನಂಬಿದ್ದೇನೆ." ಚಪ್ಪಾಳೆ! "ಇದು ಸರ್ವಾನುಮತದಿಂದ ಪಾಸಾಯಿತೆಂದು ನಾನು ತಿಳಿಯುತ್ತೇನೆ" ಎಂದು ಸಭಾಪತಿಗಳು ಕುರ್ಚಿಗೆ ಕೂತರು. ಅಷ್ಟರಲ್ಲಿ ಒಬ್ಬ ಮಹಾಶಯನು ನಡುವೆ ಎದ್ದು—'ನನ್ನದೊಂದು ಸೂಚನೆ ಇದೆ' ಎಂದನು. ಉಳಿದವರು ಅವನ ಕಡೆಗೆ ನೋಡಲಿಕ್ಕೆ ಹತ್ತಿದರು. ಪ್ರೆಸಿಡೆಂಟರು—"ಏನೂ ಅಡ್ಡಿ ಇಲ್ಲ. ಒಂದೇಕೆ, ಅನೇಕ ಸೂಚನೆಗಳನ್ನು ಕೊಡಬಹುದು. ನಿಮ್ಮದೇ ಇದೆ ಎಲ್ಲ" ಎಂದರು. ಅದಕ್ಕೆ ಆ ಮಹಾಶಯನು 'ನನ್ನ ಸೂಚನೆ ಹಿಂಗ ದಲ್ಲ! ಈ ಠರಾವಿನಲ್ಲಿ ಕುದುರೆಯ ಜವೆಗಳನ್ನು ತೆಗೆದುಕೊಂಡು ಹೋಗು

ವದು ಅಂತ ಬರದೀರಿ. ಆದರೆ ನೀವೇ ಹರೆದು ಇಟ್ಟಿರುತ್ತೀರೋ-ಅಥವಾ ನಾವೇ ಬಂದು ಹರಕೊಂಡು ಹೋಗಬೇಕೋ?' ಆ ವೇಳೆಗೆ ಬೇಕಾದ ಹಾಗೆ ಮಾಡಬಹುದು ಎಂಬ ಉತ್ತರ ಬಂತು.

'ನಾವೇ ಬಂದು ಹರಕೊಂಡು ಹೋಗುವದಾದರೆ, ಕುದುರೆಗೆ, ನೋವಾಗಬಹುದು. ಪ್ರತಿಯೊಬ್ಬರು ಬಂದು ಕ್ಷಣಕ್ಷಣಕ್ಕೆ ಕೂದಲನ್ನು ಕಿತ್ತಿದರೆ, ಕುದುರೆ ದಿಕ್ಕೆಟ್ಟು ಓಡಿ ಹೋಗಬಹುದು; ಅಥವಾ ನೋವನ್ನು ತಾಳಲಾರದೇ ಹಿಂದೆ ಬಂದವರನ್ನು ಒದ್ದು ಕೆಡವಬಹುದು; ಆಮೇಲೆ ಬಂದು ಹೋಗಿ ಬಂದಾದೀತು! ಆದ್ದರಿಂದ ನೀವೇ ಅದರ ಬಾಲದ ಕೂದಲುಗಳನ್ನು ಕತ್ತರಿಸಿ ಇಡಬೇಕು; ಅಂತ ನನ್ನ ಸೂಚನೆ' ಎಂದು ಹೇಳಿ, ಆ ಮಹಾಶಯನು ಕುಳಿತುಕೊಂಡನು. ಎಲ್ಲರೂ ನಗುತ್ತ ಚಪ್ಪಾಳೆ ತಟ್ಟಿದರು. ಪ್ರೆಸಿಡೆಂಟರು 'ಹಾಗೇ ಆಗಲಿ' ಎಂದು ಠರಾವನ್ನು ತಿದ್ದಿ ದರು. 'ಈಗ ವೇಳೆ ಬಹಳಾದ್ದರಿಂದ ಇವತ್ತಿನ ಕಾರ್ಯಕ್ರಮ ಮುಗಿ ಯಿತು. ಉಳಿದವರು ನಾಳೆ ಸವಡು ಸಿಕ್ಕರೆ ಮಾತಾಡುವರು; ಇಲ್ಲವೆ ಇನ್ನೊಂದು ದಿನ ಪ್ರತ್ಯೇಕವಾಗಿ ಸಭೆ ಸೇರಿಸಲಾಗುವದು" ಎಂದು ಪ್ರೆಸಿಡೆಂಟರು ತಮ್ಮ ಸಮಾರೋಪಣವನ್ನು ಮುಗಿಸಿದರು. ಎಲ್ಲರೂ ಎದ್ದು ನಡೆದರು ಒದರುತ್ತ ಚೀರುತ್ತ. ಅಷ್ಟರಲ್ಲಿ ಹಿಂದಿನಿಂದ 'ನಾಳೆ ಎಲ್ಲರೂ ಸರಿಯಾಗಿ ೫ ಗಂಟೆಗೆ ಇದೇ ಸ್ಥಳಕ್ಕೆ ಬರಬೇಕು' ಎಂಬ ಕೂಗು ಕೇಳ ಬಂತು. ಅನೇಕರಿಗೆ ಕೇಳಿಸದೇ, 'ಏನಂತ್ರಿ? ಏನದು?' ಎಂಬ ಪ್ರಶ್ನೆಗಳ ಗದ್ದಲಾಟವೆದ್ದಿತು.

'ನಾಳೆ ಐಯ್ದು ಗಂಟೆಗೆ ಬರಬೇಕಂತೆ!'

'ಎಲ್ಲಿಗೆ?'

'ಇಲ್ಲಿಗೇ! ಮತ್ತೆಲ್ಲಿಗೆ? ನಾಳೆ ಸವಾರ ಬರತಾನಂತೆ ಅದಕ್ಕ!'

'ಹೀಂಗ! ಹಂಗಾರ ನಾವೂ ಬರೋಣ. ಏನದ ೫ ಕ್ಕೇನು ಕೆಲಸ! ಏನಿಲ್ಲ! ಸಹಜ ಅಡ್ಡಾಡಿಕೋತ ಬಂದರಾಯಿತು ಇತ್ತ ಕಡೆಗೆ. ಸವಾರ ಹ್ಯಾಂಗಿದ್ದಾನ ನೋಡೋಣ! ಬಹಳ ದೂರಿಂದ ಬರತಾನ ಕಾಣತ್ತೈತಿ?' 'ಹೌದು-ಹೌದು' ಎನ್ನುತ್ತ ನಡೆದಿತ್ತು ಜನಮನರಾಶಿ ಮನೆ ಕಡೆಗೆ—

## ೧೦

ಇಂದು ಶುಕ್ರವಾರ. ವೇಳೆ ಸುಮಾರು ಹಗಲು ಹನ್ನೆರಡು ಗಂಟೆ. ಊರ ತುಂಬ ಸುವರ್ಣಗೌರಿ ಪೂಜೆ. ಮಾರ್ಗಗಳಲ್ಲಿ ನಾನಾತರದ ತೋರಣಗಳೂ ಕದಳೀಸ್ತಂಭಗಳೂ ಸುಸ್ವಾಗತಪಟಗಳೂ ಮನುಷ್ಯನ ಕೈಗೆ ಸಿಕ್ಕದಷ್ಟು ದೂರ ತಲೆಯ ಮೇಲೆ ಹಾರಾಡುತ್ತಿದ್ದವು. ಧೂಪ ಮೊದಲಾದ ಸುಗಂಧದ್ರವ್ಯಗಳ ವಾಸನೆಯಿಂದೊಡಗೂಡಿದ ಹವೆಯು ನಾಸಿಕಾನಂದವನ್ನುಂಟು ಮಾಡುತ್ತ ಅತ್ತಿತ್ತ ಅಲೆದಾಡುತ್ತಿತ್ತು. ಅನೇಕ ಊರುಗಳಿಂದ ಬಂದ ಜನರು ಸುವರ್ಣ ಪೂಜೆಯನ್ನು ಆಶ್ಚರ್ಯದಿಂದಲೂ, ಆನಂದದಿಂದಲೂ ನೋಡುತ್ತ ಅಲ್ಲಲ್ಲಿ ನೆರೆದಿದ್ದರು. ಪ್ರೇಕ್ಷಕರ ಉತ್ಸುಕತೆಯನ್ನು ಹೆಚ್ಚಿಸುವದಕ್ಕೆ ಪೂಜಾರಿಯು ಗಂಟೆಯನ್ನು ಬಾರಿಸುತ್ತಿದ್ದನು. ಮಂಗಳವಾದ್ಯವು ಆಕಾಶವನ್ನೆಲ್ಲ ವ್ಯಾಪಿಸಿತ್ತು. ಒಬ್ಬರ ಮಾತು ಒಬ್ಬರಿಗೆ ಕೇಳಸದಾಯಿತು. ವಾದ್ಯನಾಗರದಲ್ಲಿ ಜನಮನವು ತೇಲುತ್ತಿತ್ತು. ಸುವರ್ಣಗೌರಿ ಪೂಜೆಯನ್ನು ಕಣ್ಣುತುಂಬ ಕಂಡು, ಧನ್ಯವಾದಗಳನ್ನು ತಮಗೆ ತಾವೇ ಅರ್ಪಣ ಮಾಡಿಕೊಳ್ಳುತ್ತಿದ್ದರು. ‘ಇಂತಹ ಗೌರಿ ಪೂಜೆಯೇ ಪೂಜೆ! ಲೋಕಪಾವನೆ! ಲೋಕಜೀವದಾತೆ!! ಜಗನ್ಮೋಹಿನಿ !! ಜಗತ್ರಾತೆ !!!!’ ಎಂದು ಬಗೆ ಬಗೆಯಿಂದ ಆ ಹೊಸೂರ ಆರಾಧ್ಯ ದೇವತೆಯನ್ನು ತುತಿಸುವಷ್ಟರಲ್ಲಿ ಒಂದು ಗಂಟೆಯಾಯಿತು. ಊಟದ ಹೊತ್ತಾದ್ದರಿಂದ ಜನಗಳೆಲ್ಲ ಊಟದ ಮನೆ ಕಡೆಗೆ ಲಗುಬಗೆಯಿಂದ ಸಾಗಿದರು. ಲಕ್ಷ್ಮೀಪೂಜೆಯ ಪ್ರಸಾದತೀರ್ಥಗಳೆಲ್ಲ ತಮ್ಮ ತಮ್ಮ ಸ್ಥಾನದಲ್ಲಿಯೇ ಉಳಿದಿದ್ದವು. ಪ್ರೇಕ್ಷಕರಿಗೆ ಲವಲೇಶಮಾತ್ರವೂ ದೊರೆಯಲಿಲ್ಲ.

× × × × × ×

ಸುಮಾರು ನಾಲ್ಕು ಗಂಟೆ. ಒಂದು ವಿಶಾಲವಾದ ಬೈಲು. ನಾಲ್ಕೂ ಕಡೆಯಿಂದ ಜನರು ಬಂದು ಅಲ್ಲಿ ಸೇರುತ್ತಿರುವರು. ಮುಖಚರ್ಯೆಯಿಂದ ಆದೇ ಊಟ ಮುಗಿಸುಕೊಂಡು ಬಂದಂತೆ ತೋರುತ್ತಿದ್ದರು. ಪಾನಪಟ್ಟಿ, ಸಿಗಾರೇಟುಗಳ ಹಾರಾಟ. ಎಲ್ಲರ ದೃಷ್ಟಿ ಆಕಾಶದ ಕಡೆಗೆ. ಸವಾರನು ಎತ್ತ ಕಡೆಯಿಂದ ಬರುವನೋ ಎಂಬ ನಿರೀಕ್ಷಣೆ. ಸಿಗಾರೇಟಿನ ಹೊಗೆ ಮುಸುಕಿದ್ದರಿಂದ ಮೇಲೆ ಹಾರುವ ಹಕ್ಕಿಗಳು ಕೂಡ ಕಾಣದಂತಾದವು.

“ ಏ ! ಯಾರವರು ? ಹೊಗೆ ಬಿಡಬ್ಯಾಡ್ರಿ ! ಸವಾರ ಬಂದದ್ದು ಕಾಣೋದಿಲ್ಲ. ಮನೆಯೊಳಗೆ ಸೇದಿ ಬರಬಾರದ ! ” ಎಂದು ಅಲ್ಲಲ್ಲಿ ನಿಂತಿದ್ದ ಒಳ್ಳೇ ಉತ್ಸಾಹಿ ತರುಣಮುದುಕರು ಗುನುಗುಟ್ಟುತ್ತಿದ್ದರು. ಆದರೆ ಹೊಗೆಯು ಮತ್ತಿಷ್ಟು ಹೆಚ್ಚಾಯಿತು. ಒಮ್ಮೆ ಸಿಗಾರೇಟಿನ ಹೊಗೆಯನ್ನೆಳೆದು, ಸವಾರನು ಬಂದನೋ ಎಂದು ನೋಡುವದಕ್ಕೆ ಮೇಲಕ್ಕೆ ಮುಖ ಮಾಡಲು, ಹೊಗೆಯು, ಬಾಯಿ ಮೂಗುಗಳ ಮಾರ್ಗವಾಗಿ ನೆಟ್ಟಗೇ ಆಕಾಶಕ್ಕೆ ಹಾರಿ ಹೋಗುತ್ತಿತ್ತು. ಇದನ್ನು ಕಂಡು ಅನೇಕರು ಸಿಟ್ಟಿಗೆದ್ದರು. ‘ ಏನಪಾ ಅದು ? ಆರಿಸಿರಿ ! ಆರಿಸಿರಿ !! ನಾಕು ಹಿಂದಾಗಡೆ ಸೇದೀರಂತ ಮತ್ತಿಷ್ಟು ! ಸವಾರ ಬರತಾನ ಇನತ್ತಾರ ಬಿಡ್ರಿ ಸೇದೋದು. ಅದಕ್ಕ ಹೀಂಗ ಆಗೇದರಿ ! ಅವರೇನು ಸುಳ್ಳ ಹೇಳತಾರ ! ಏನೇನೂ ತಿಳಿಯೋದಿಲ್ಲ, ” ಎಂದು ಬಗೆಬಗೆಯ ಜನರು ಬಗೆಬಗೆಯಿಂದ ಮಾತಾಡುತ್ತಿದ್ದರು. ಸಿಗಾರೇಟ ಸೇದುವವರು ‘ ಸವಾರ ಬಂದ್ರೇನಾಯಿತು. ಸಿಗಾರೇಟಿನ ಮೇಲೆ ಅವನದೇ ಚಿತ್ರವಿದೆ! ಅದಕ್ಕ ನಾವೇನು ಮಾಡೋಣ ? ” ಎಂದು ತಮ್ಮ ತಮ್ಮೊಳಗೆ ಸಮಾಧಾನ ಹಚ್ಚಿಕೊಂಡು ಜನನಿಂದೆಯಿಂದ ಮುಕ್ತರಾಗುತ್ತಿದ್ದರು. ಅಷ್ಟರೊಳಗೆ ಭರ್ರೆಂಬ ಸಪ್ಪಳವು ಕೇಳಬಂತು. ಎಲ್ಲರೂ ಕುಳಿತವರು ಥಟ್ಟನೆ ಎದ್ದು ನಿಂತು, ಆಕಾಶದ ನಾಲ್ಕೂ ದಿಕ್ಕಿನ ಕಡೆಗೆ ನೋಡತೊಡಗಿದರು. ೫ ಗಂಟೆಗೆ ೧೦ ನಿಮಿಷ ಉಳಿದಿತ್ತು. ಸವಾರನೇ ಬಂದನೆಂಬದು ಎಲ್ಲರ ಕಲ್ಪನೆ. ‘ ಎಲ್ಲಿ ? ಎಲ್ಲಿ ? ’ ಎಂಬ ಪ್ರಶ್ನೆಗಳ ಘಟಾಟೋಪ ನಡೆಯಿತು. ‘ ಎಲ್ಲೇನ್ರಪಾ ! ಸಪ್ಪಳನಕಾ ಆತು ! ಯಾವ ಕಡೆಯಿಂದ ಬರತಾನೋ ಯಾರು ಬಲ್ಲರು ? ಇಂತಹ ದಿಕ್ಕು ಅಂತ ಪ್ರಸಿದ್ಧ ಮಾಡಿಲ್ಲ. ’

‘ ಅಕೋ ! ಅಕೋ !! ಅಲ್ಲಿ–ಅಲ್ಲಿ ಕಾಣಸ್ತದ ಕರ್ರಗೆ. ಪಕ್ಷಿಹಂಗ ಕಾಣತದಲ್ಲ ಅದೇ ಇರಲಿಕ್ಕೆಬೇಕು. ಇನ್ನೂ ೪ ಹರದಾರಿ ದೂರ ಇದ್ದಾನ. ಆದರೂ ಸಪ್ಪಳ ಎಷ್ಟು ದೂರ ಕೇಳಸ್ತದ ನೋಡ್ರಿ ಅ ! ’

“ ಏನು ? ವಿಮಾನದ ಮ್ಯಾಲ ಬರತಾನ ಕಾಣ್ತದ ! ”

“ ಮತ್ತ ಕುದರಿ ಮ್ಯಾಗ ಬರತಾನ ಅಂತಿದ್ರಿ ! ನಿನ್ನೆ ಸಭಾದಾಗ ಹೇಳಲಿಲ್ಲ ? ”

" ಅವರಿಗಾದರೂ ಏನು ಗೊತ್ತು. ಸವಾರ–ಅಂದ ಮ್ಯಾಲ, ಕುದರಿ ಇದ್ದೀತು ಅಂತ."

" ಓಹೋ ಸಿಂಪಲ್ ಲಾಜಿಕ್ ಹಾ! ಹಾ!!" ಎಂದು ಅನೇಕ ತರಹದ ವಿಚಾರತರಂಗಗಳು ಅಲೆದಾಡುತ್ತಿದ್ದವು ಜನದಟ್ಟನೆಯೊಳಗೆ. ಮೇಲಕ್ಕೆ ಮುಖ ಮಾಡಿ " ಬಂತು! ಬಂತು!! ಇಲ್ಲಿಯೇ ಬಂತು!!!" ಎನ್ನುವಷ್ಟರಲ್ಲಿ ಬಯಲೊಳಗಿದ್ದ ಜನಗಳ ದೃಷ್ಟಿಪಥವನ್ನು ದಾಂಟಿ, ಒಂದು ವಿಮಾನವು ಆಕಾಶದಲ್ಲಿ ಹೋಯಿತು. ಎಲ್ಲರೂ ನಿರಾಶರಾದರು. 'ಅದು ಅಲ್ರಿ! ಸವಾರಂದು ಹೀಂಗ ಇಲ್ಲ! ಅವಂದು–ಹೊಸ ಮೋರಾ ವಿಮಾನ. ಮೊನ್ನೆ ಯಾರೋ ದಾನ ಕೊಟ್ಟಾರಂತ ಅವಂಗ, ಒಂದು ಊರಾಗ.' ಹಂಗಾದ್ರ ಇದು ಅಲ್ರಪಾ? ಅದ್ಯಾಕರಿ ಅದೇ ಹೌದು! ಮುಂದಿನ ಊರಿಗೆ ಕ್ಯಾಂಪ ಇದ್ರ ಯಾರಿಗೆ ಗೊತ್ತು? ಪ್ರೋಗ್ರಾಮ್ ಚೇಂಜ್ ಆಗೇದೋ ಏನೋ? ಕಾರ್ಯದರ್ಶಿಗಳನ್ನಾರ ಕೇಳೋಣ ತಾರೇನಾದರೂ ಬಂದಿದೇನು ಅಂತ!' ಎಂದು ಕಾರ್ಯದರ್ಶಿಯುವರನ್ನು ಅತ್ತಿತ್ತ ಹುಡುಕಾಡುವಷ್ಟರಲ್ಲಿ, ಬಯಲಿನ ಉತ್ತರ ಭಾಗಕ್ಕಿದ್ದ ಜನರು ಅತ್ತ ಕಡೆಗೆ ಓಡಹತ್ತಿದರು. 'ಏನು? ಏನು? ಯಾಕ ಓಡತಾರ ಈ ಜನ?'

'ಸವಾರ, ಆ ಮುಂದಿನ ಹೊಲದಾಗ ಬಂದಿಳದಾನಂತ! ಅದಕ್ಕ!'

'ಹೀಂಗ? ಬಂದರ ಓಡಬೇಕ್ಯಾತಕ್ಕ? ಇಲ್ಲಿಗೇ ಕರಕೊಂಡು ಬರತಾರಲ್ಲ! ಯಾಕ ಸುಮ್ಮನೆ ಓಡಬೇಕು ಗದ್ದಲದಾಗ? ಹೋಗಲಿ ಬಿಡು! ಗದ್ದಲಾರ ಕಡಿಮೆ ಆಗತದ. ಕೂಡ್ರಿ ಇಲ್ಲಿಯೇ ಬರತಾನ!'

'ಹೋಗೋಣ ನಡ್ರಿ, ಕೂತೇನು ಮಾಡಬೇಕು? ವ್ಯಾಯಾಮಾರ ಆಗತದ.' 'ಇದಽ ಊಟ ಆಗೇದ! ಯಾರ ಹೋಗಬೇಕ್ರಪಾ ಅಟದೂರ! ಕೆಲಸಿಲ್ಲ–ಬಗಸಿಲ್ಲ. ಬಂದರ ನೋಡಿದ್ಯಾ, ಇಲ್ಲದಿದ್ದರ ಇಲ್ಲ. ಏನು ದೊಡ್ಡ ಮಾತಲ್ಲ. ರಗಡಸರೇ ನೋಡೇವ ಅವನ್ನ ಫೋಟೋದಾಗ!' ಹೀಗೆಂದು ಕೆಲವು ೧೯೩೩ನೇ ಇಸ್ವಿಯ ತರುಣರು ಅಲ್ಲಿಯೇ ಬಯಲೊಳಗೆ ಕುಳಿತುಬಿಟ್ಟರು. ಕೆಲವರು ಅತ್ತಿತ್ತ ಅಡ್ಡಾಡುತ್ತಿದ್ದರು. ಮತ್ತೆ ಕೆಲವರು ದಕ್ಷಿಣ ದಿಕ್ಕಿನ ಕಡೆಗೆ ಸಾವಧಾನದಿಂದ ಸಾಗಿದ್ದರು. ಜನಸಂದಣಿಯೆಲ್ಲ ಅಲ್ಲೋಲಕಲ್ಲೋಲವಾಗಿತ್ತು. ಮುಂದೆ ಅರ್ಧ ಘಂಟೆಯ ತರು

ವಾಯು ಮತ್ತೊಂದು ಆಶ್ಚರ್ಯವುಂಟಾಯಿತು. ಆಗ್ಗೆ ೫ ಕ್ಕೆ ಮೀರಿತ್ತು. ಸವಾರನ ಸುದ್ದಿಯೇ ಇಲ್ಲ. ಹೊಲದ ಕಡೆಗೆ ತೆರಳಿದ ಜನರು ತಿರುಗಿ ಬರಹತ್ತಿದ್ದರು. 'ಎಲ್ಲ ಕೆಲಸ ಘಾತವಾಯಿತು. ಹೇಗಾದರೂ ಮಾಡಿ ಸವಾರನನ್ನು ಹಿಡಿದು ತರಬೇಕು. ಅಂದರೆ ನಮ್ಮ ಕೆಲಸ ಸಾಧ್ಯ' ಎಂದು ಹೊಸೂರವರು ಚಿಂತೆಗೊಳಗಾಗಿದ್ದರು. ಆ ಸಮಯಕ್ಕೆ ಆಕಾಶದಲ್ಲಿ ಒಂದು ಗಂಭೀರ ವ್ಯಕ್ತಿಯು ಕಂಗೊಳಿಸಿತು. ಆ ವ್ಯಕ್ತಿಯ ವಾಹನಕ್ಕೆ ನಾಲ್ಕು ಕಾಲುಗಳಿದ್ದಂತೆ ತೋರುತ್ತಿತ್ತು. ವ್ಯಕ್ತಿಯೂ ವಾಹನವೂ ವಸ್ತ್ರವೂ ಶುಭ್ರವರ್ಣವಾಗಿದ್ದರಿಂದ ಆಕಾಶದಲ್ಲಿ ಅವು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಸಕಲರು ಅವನೇ ಸವಾರನೆಂದು ಬಗೆದರು. ಮುಖಗಳೆಲ್ಲ ಗಗನಕ್ಕೆ ಒಲಿದಿದ್ದವು. ಹೊಸೂರವರು ಕೈಮುಗಿದು ಅಂಗಲಾಚಿ ಬೇಡಿಕೊಳ್ಳುತ್ತಿದ್ದರು. ವಾಹನದ ಹೊಟ್ಟೆಯ ಕಡೆಗೇ ಅವರ ಲಕ್ಷ್ಯ. ಕೆಳಗಿಳಿದು ಬಂದು, ಹೂವಿನ ಮಾಲೆಯನ್ನು ಸ್ವೀಕರಿಸಿಕೊಂಡು ಹೋಗಬೇಕೆಂಬ ಅವರ ಕೈಸನ್ನೆ. ಇದನ್ನೆಲ್ಲ ಆ ವ್ಯಕ್ತಿಯು ನೋಡಿ ಆಶ್ಚರ್ಯಪಟ್ಟಿತು. ನಿಜವಾಗಿಯೂ ಆ ವ್ಯಕ್ತಿಯು ಸವಾರನು. ಅಡವಿಯಲ್ಲಿ ರುದ್ರಾಕ್ಷಿಯನ್ನು ಕಚ್ಚಿಕೊಂಡು ಹೋದ ಸರ್ಪದ ಹೆಡೆಯು, ಆ ರುದ್ರಾಕ್ಷಿಯನ್ನು ಹೊಲದೊಳಗೆ ಚೆಲ್ಲಿತ್ತು. ಅದನ್ನು ತಕ್ಕೊಳ್ಳುವದರ ದೆಶೆಯಿಂದ ಸವಾರನು ಹೊಲದೊಳಗೆ ಇಳಿದಿದ್ದನು. ಅದಕ್ಕೇ ಅತ್ತ ಕಡೆಗೆ ಜನರು ಓಡಿ ಹೋಗಿದ್ದರು. ಆದರೆ ಅವರು ಅಲ್ಲಿಗೆ ತಲುಪುವದರೊಳಗೇ ಸವಾರನು ಮೇಲಕ್ಕೆ ಹಾರಿ ಹೋಗಿದ್ದನು. ಈಗ ಈ ಜನದಟ್ಟಣೆಯನ್ನೂ ಅವರೊಳಗಿನ ಕೆಲವರ ದೀನ ಮುಖಮುದ್ರೆಯನ್ನೂ ಕಂಡು, ಸವಾರನ ಮನಸ್ಸು ಕರಗಿ ನೀರಾಯಿತು. 'ಪ್ರಯಾಣಕ್ಕೆ ತಡವಾದರೂ ಚಿಂತೆ ಇಲ್ಲ. ಒಂದು ಅರ್ಧ ತಾಸು ತಡೆದು ಹೋಗಬೇಕೆ'ಂದು ಮನದೊಳಗೆ ಯೋಚಿಸಿದನು. ಆದರೆ ಕುದುರೆಯು 'ಬೇಡ'ವೆಂದು ಸೂಚನೆ ಮಾಡುತ್ತಿತ್ತು. ಅತ್ತ ಲಕ್ಷ್ಯ ಕೊಡದೇ ಸವಾರನು ಭೂಮಿಗೆ ಇಳಿಯಲಾರಂಭಿಸಿದನು. ಎಲ್ಲರೂ ಹಿರಿಹಿರಿ ಹಿಗ್ಗಿದರು. 'ಸರ್ರಿ! ಸರ್ರಿ!!' ಎಂದು ಸವಾರನಿಗೋಸ್ಕರ ಜನರನ್ನು ಸರಿಸುತ್ತಿದ್ದರು. ಹೊಸೂರವರ ಹೆಮ್ಮೆಯ ಹಾರಾಟ, ಪರಊರವರ ಮೋಕ್ಷದ ಗದ್ದಲಾಟಗಳೆದ್ದವು. ಪರಊರವರು ಒಂದು

ಗಳಿಗೆ, ಮೋಕ್ಷದ ಕಲ್ಪನೆಯಲ್ಲಿ ಮೈಮರೆದರು. ಸವಾರನು ಪರವೂರವರ ಕಡೆಗೇ ಇಳಿಯುತ್ತಿದ್ದನು. ಅಂತ್ಯದಲ್ಲಿ, ಸವಾರನ ಕುದುರೆಯು ಬಯಲಿನ ಒಂದು ಮೂಲೆಯೊಳಗೆ ಕುಳಿತಿದ್ದ ಕಲ್ಲ ಮಲ್ಲರವರ ಹತ್ತಿರ ಬಂದಿಳಿಯಿತು. ಮಲ್ಲ ಅವರು ಎದ್ದು ನಿಂತು ಸವಾರನಿಗೆ ಕೈಮುಗಿದರು. ಕುದುರೆಯು ತಲೆ ಅಲ್ಲಾಡಿಸಿ, ಎವೆಯಿಕ್ಕದೆ ಅವರನ್ನು ನೋಡುತ್ತಿತ್ತು. ಅಷ್ಟರೊಳಗೆ, ಜನರು ಬಂದು, ಕುದುರೆಯನ್ನು ಮುತ್ತಿದರು. ಸವಾರನ ಶಾಂತ, ಗಂಭೀರಸ್ವರೂಪವನ್ನು ಕಣ್ಣಾತುಂಬ ಕಂಡು ಜನಮನ ತಣಿಯಿತು. ಗದ್ದಲದೊಳಗಿಂದ ಕಾರ್ಯದರ್ಶಿಯು ಬಂದು, 'ಎಲ್ಲರೂ ಮೆರವಣಿಗೆಯ ದೆಶೆಯಿಂದ ನಾಲಾಗಿ ನಿಲ್ಲಬೇಕು' ಎಂದು ಕೂಗಿದನು. ಸವಾರನು ಬೇಡವೆಂದುದಕ್ಕೆ ಕಾರ್ಯದರ್ಶಿಯು 'ಏನೂ ಪರವಾ ಇಲ್ಲ. ಕಾರ್ಯಕ್ರಮ–ಮೆರವಣಿಗೆ ಅಂತ ಇಟ್ಟಿದ್ದೇವೆ. ಏನಿಲ್ಲ– ಇಲ್ಲಿಯೇ ಊರೊಳಗಿನ ಮುಖ್ಯ ಮಾರ್ಗವಾಗಿ ಹಾಯ್ದು, ಆಡೆಗೆ ಗ್ರಾಮದೇವತೆಯ ಗುಡಿಗೆ ಹೋಗಿ, ಮತ್ತೆ ತಿರುಗಿ ಇಲ್ಲಿಗೇ ಬರೋಣ! ಆಮೇಲೆ ಮುಂದಿನ ಕಾರ್ಯ' ಎಂದು ಸಮಾಧಾನ ಹೇಳಿದನು. ಸವಾರನು ನಿರ್ವಾಹವಿಲ್ಲದೆ ಇದಕ್ಕೆ ಒಪ್ಪಬೇಕಾಯಿತು. ಮೆರವಣಿಗೆಯು ಒಳ್ಳೇ ವಿಜೃಂಭಣೆಯಿಂದ ಸಾಗಿದರೂ ಜನದಟ್ಟಣೆಯ ಮೂಲಕ ವ್ಯವಸ್ಥೆ ಸರಿಯಾಗಿ ಆಗಲಿಲ್ಲ. ಹಾಗೂ ಹೀಗೂ 'ಮದನಕಟ್ಟೆ', 'ಗುಳದಾಳಿಕಟ್ಟೆ', 'ಬಂಗಾರಗಟ್ಟೆ', 'ಹಂಜಿಬುಟ್ಟಿ', 'ಅಂಜಿಸುವ ಸೆಟ್ಟಿ', 'ಕಂಡವರ್ನ ಸುಟ್ಟಿ' ಮೊದಲಾದ ಮುಖ್ಯ ಮುಖ್ಯ ಓಣಿಗಳಲ್ಲಿ ಹಾಯ್ದು, ಗ್ರಾಮದೇವತೆಯಾದ ಸುವರ್ಣಗೌರಿ ಗುಡಿಗೆ ಮೆರವಣಿಗೆ ಬಂದಿತು. ಕಾರ್ಯದರ್ಶಿಯೂ ಕೊಟ್ರೆಬೊಗಳಪ್ಪನವರೂ ಮೊದಲಾದ ಊರ ಮುಖ್ಯಸ್ಥರೂ ಗುಡಿಯ ಸಂಚಾಲಕರೂ ಮುಂದೆ ಬಂದು ಸವಾರನಿಗೆ ಕುದುರೆಯಿಂದ ಕೆಳಗಿಳಿಯಲು ವಿನಂತಿ ಮಾಡಿಕೊಂಡರು. ಆದಕ್ಕೆ ಸವಾರನು—

'ಏನೂ ಅಡ್ಡಿ ಇಲ್ಲ. ನಾನು ಇಲ್ಲಿಂದಲೇ ದೇವರಿಗೆ ನಮಸ್ಕರಿಸುವೆ. ಕೆಳಗಿಳಿಯಲು ಸಾಧ್ಯವಿಲ್ಲ!' ಎಂದನು.

ಕಾರ್ಯದರ್ಶಿ :— 'ಅದೆಲ್ಲ ಸರಿ! ಆದರೆ.........' (ಬೊಗಳಪ್ಪನವರ ಕಿವಿಯಲ್ಲಿ ನಾಲ್ಕು ಮಾತು ಹೇಳಿ) 'ಆದರೆ......... ಒಂದೆರಡು

ನಿಮಿಷ ಇಳಿಯಿರಿ! ಇದೇ ಗುಡಿ. ಒಳಗೆ ಹೋಗಿ ಬರೋಣ. ಹೊಸೂರು. ಹೊಸ ದೇವತೆಯನ್ನು ಸ್ಥಾಪಿಸಿದ್ದೇವೆ. ಅದನ್ನು ತಮಗೆ ತೋರಿಸ ಬೇಕೆಂದು ನಮ್ಮೆಲ್ಲರ ಬಲವಾದ ಇಚ್ಛೆ. ಆದ್ದರಿಂದ ತಾವು ದಯಮಾಡಿ ಒಳಗೆ ಬರಬೇಕು.'

ಸವಾರನು :— 'ಒಳ್ಳೇದು ! ಕುದುರೆಯೂ ಒಳಗೆ ಹೋಗುವಷ್ಟು ದಾರಿ ಇದೆಯೇ ?'

ಕಾರ್ಯ :— 'ಇಲ್ಲ ಸ್ವಾಮೀ ! ದೇವತೆ ಹೊಸದಾದರೂ, ಗುಡಿ ಪುರಾತನ ಕಾಲದ್ದು. ಗುಡಿಯ ಬಾಗಿಲು ಚಿಕ್ಕದಾಗಿದೆ.'

ಸವಾರನು :— 'ಹಾಗಾದರೆ ಉಪಾಯವಿಲ್ಲ. ಕ್ಷಮಿಸಿರಿ! ಇಲ್ಲಿಂದಲೇ ಆಕೆಗೆ ಸಹಸ್ರ ವಂದನೆಗಳು.'

ಕಾ:— 'ಅಲ್ಲದೆ, ಮತ್ತೆ, ಈಗ ಹದಿನೈದು ದಿವಸದಿಂದ ಒಬ್ಬ ಭಕ್ತನು ವ್ರತವನ್ನಾಚರಿಸುತ್ತಿದ್ದಾನೆ. ಯಾವಾಗಲೂ ಗುಡಿಯೊಳಗೇ ಇರುತ್ತಾನೆ. ತಾವು ಬರುವ ವರೆಗೆ, ತಮ್ಮ ಹಸ್ತಸ್ಪರ್ಶವಾಗುವ ವರೆಗೆ, ತಾನು ವ್ರತವನ್ನು ಬಿಡುವದಿಲ್ಲೆಂದು ನಿಶ್ಚಯಿಸಿದ್ದಾನೆ. ಉಪವಾಸದಿಂದ ಬಹಳೇ ಕ್ಷೀಣನಾಗಿ ಸಾಯಲಾಗಿರುವನು. ಅವನ ದೆಸೆಯಿಂದಾದರೂ ತಾವು ಅಲ್ಲಿಗೆ ಬರಬೇಕು' ಎಂದು ಬೇಡಿಕೊಂಡನು. ಜನಗಳೆಲ್ಲ ದಿಂಗು ಬಡೆದು ನಿಂತಿತ್ತು. ಸವಾರನಿಗೆ ದಿಗಿಲು ಬಿತ್ತು. ಕುದುರೆಯನ್ನು ಬಿಟ್ಟು ಇಳಿಯುವ ಹೊತ್ತು ಬಂತು; ಮುಂದೇನಾಗುವದೋ ಎಂಬ ಸಂಶಯ ಉತ್ಪನ್ನವಾಯಿತು; ಎಷ್ಟು ವಿಚಾರಿಸಿದರೂ ಕಡೆಗಾಣದೆ ಹೋಯಿತು. ಆ ಕ್ಷಣವೇ ಪೂಜಾರಿಯು ಓಡಿ ಬಂದು—"ಸವಾರರೇ! ತಾವು ದೊಡ್ಡ ವರು! ನಾನು ಪಾಮರನು. ಆದರೂ ಪರಂಪರೆಯಾಗಿ ನಡೆಯುತ್ತ ಬಂದ ಕಟ್ಟಳೆಯನ್ನು ತಾವು ಪಾಲಿಸಬೇಕು. ಈ ಗುಡಿಯ ಮುಂದೆ ಯಾರೂ ವಾಹನವನ್ನು ಹತ್ತಿಕೊಂಡು ನಿಲ್ಲಬಾರದೆಂದು ನಿಯಮವಿದೆ; ನಾವೆಲ್ಲರೂ ಅದರಂತೆ ಆಚರಿಸುತ್ತೇವೆ. ತಾವು ತಿಳಿದವರು, ಅದನ್ನು ನಿರಾಕರಿಸಲಿಕ್ಕಿಲ್ಲೆಂದು ನಾನು ತಿಳಿಯುತ್ತೇನೆ. ಒಂದು ವೇಳೆ ಆ ನಿಯಮವನ್ನು ಯಾರಾದರೂ ನಿರಾಕರಿಸಿದರೆ, ಅಲಕ್ಷ್ಯ ಮಾಡಿದರೆ, ಅದರ ಪಾಪವು ಪೂಜಾರಿಯಾದ ನನ್ನ ಮೇಲೆ ಬಂದು, ಮುಂದೆ ಒಂದು ತಾಸಿನೊಳಗೆ ನಾನು ಸಾಯಬೇಕಾ

ಗುವದು. ಆದ್ದರಿಂದ ಹೇಗಾದರೂ ಮಾಡಿ ತಾವು ಕುದುರೆಯಿಂದ ಕೆಳಗಿಳಿದು, ನನ್ನ ಜೀವವನ್ನು ಉಳಿಸುವಿರೆಂದು ನಾನು ತಮ್ಮನ್ನು ಬೇಡಿಕೊಳ್ಳುತ್ತೇನೆ" ಎಂದು ಆ ಸವಾರನ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡನು. ಕುದುರೆಯು ಕಾರ್ಯದರ್ಶಿ ಮೊದಲಾದವರನ್ನು ವಕ್ರದೃಷ್ಟಿಯಿಂದ ದಿಟ್ಟಿಸಿ ನೋಡುತ್ತಿತ್ತು. ಪೂಜಾರಿಯ ವಚನವನ್ನು ಕೇಳಿ ಸವಾರನು ನಿರುಪಾಯನಾದನು ಆಗಲಿ. 'ಜಯಮಾಂಕಾಳಿ ಜಯ' ಎಂದು ಕೆಳಗಿಳಿದನು. ಕುದುರೆಯ ಲಗಾಮನ್ನು ತನ್ನ ಕೈಯಲ್ಲಿಯೇ ಹಿಡಿದುಕೊಂಡು, ಮುಂದಕ್ಕೆ ಹೋಗಿ ದೇವತೆಗೆ ನಮಸ್ಕರಿಸಲು, ಎಲ್ಲರೂ ನಮಸ್ಕರಿಸಿ, ಮಾಂಕಾಳಿಯ ಜಯಘೋಷ ಮಾಡಿದರು. ಮುಂದೆ ಅದೇ ಗುಡಿಯ ಹಿಂದೆ ಇದ್ದ ಬಯಲೊಳಗೆ ಸಭೆ ಕೂಡಿಸುವದಕ್ಕಾಗಿ ಅತ್ತ ಕಡೆಗೆ ಸಾಗಿದರು.

ಸಾವಿರಾರು ಜನ ನೆರೆಯಿತು. ಅನೇಕರು ಹಿಂದೆ ದುಂಡಗೆ ನಿಂತು ಬಿಟ್ಟರು. ಕೂಡ್ರಿಸುವದಕ್ಕೆಷ್ಟು ಪ್ರಯತ್ನ ಮಾಡಿದರೂ ಸಾಧ್ಯವಾಗಲಿಲ್ಲ. ಸಭಾಪತಿಗಳಾದಂಥ ಕೊಟ್ರೆ ಬೊಗಳಪ್ಪನವರು ಒಂದು ಕುರ್ಚಿಯ ಮೇಲೆ ಕುಳಿತಿದ್ದರು. ಅದಕ್ಕೂ ಎತ್ತರವಾದ ಸ್ಥಾನದಲ್ಲಿ ಸವಾರನನ್ನು ಕುಳ್ಳಿರಿಸಿದ್ದರು. ಮುಂದೆ ಒಂದು ದೊಡ್ಡ ಮೇಜು. ಇದರ ಸುತ್ತಲೂ ಊರ ಗೃಹಸ್ಥರು ಕೆಳಗೆ ನೆಲದ ಮೇಲೆ ಆಸೀನರಾಗಿದ್ದರು. ಸವಾರನ ಕುದುರೆಯನ್ನು ಸವಾರನ ಹಿಂದೆಯೇ ಒಂದು ಗೂಟಕ್ಕೆ ಕಟ್ಟಿತ್ತು. ಅದರ ಲಗಾಮು ಸವಾರನ ಕೈಯಲ್ಲಿಯೇ ಇತ್ತು. ಮುಂದೆ 'ಸದ್ದು' ಉಂಟಾದ ಮೇಲೆ, ಕಾರ್ಯದರ್ಶಿಗಳು, ಎರಡು ಮಾತು ಹೇಳುವದಕ್ಕೆ ಮೇಜಿನ ಹತ್ತಿರ ಬಂದು ನಿಂತರು. 'ಸದ್ದು' ಹೆಚ್ಚಾಯಿತು, ಆನಂತರ ಕಡಿಮೆಯಾಯಿತು. ಕಾರ್ಯದರ್ಶಿಗಳ ಪ್ರಾಸ್ತಾವಿಕ ಭಾಷಣ ನಡೆಯಿತು—"ಸನ್ಮಾನ್ಯ ಅಧ್ಯಕ್ಷರೇ! ಮತ್ತು ಪ್ರಿಯ ಮಿತ್ರರೇ! ಇವತ್ತಿನ ದಿವಸ ಅಂತದ್ರ, ನಮ್ಮ ಹೊಸೂರ ಇತಿಹಾಸದಲ್ಲಿ ಇದೊಂದು ಚಿರಸ್ಮರಣೀಯವಾದಂತಹದು. ಇವತ್ತು ನಾವೆಲ್ಲರೂ ಧನ್ಯರೆಂದು ನಾನು ತಿಳಿಯುತ್ತೇನೆ. ವಿಶೇಷತಃ ಈ ಊರವರು ಇವತ್ತಿನ ದಿವಸ ತಮ್ಮ ಸರ್ವಸ್ವನ್ನೆಲ್ಲ ತ್ಯಾಗಮಾಡಿ, ಇಲ್ಲಿ ಆಗಮಿಸಿದಂತಹ ಸವಾರ ಮಹನೀಯರ ಆದರಾತಿಥ್ಯಕ್ಕೆ ಟೊಂಕ ಕಟ್ಟಿ

ಕೊಂಡು ನಿಂತದ್ದು ಅಂತಂದ್ರ– ಧನ್ಯ! ಧನ್ಯ!! ಸಾವೇ ಧನ್ಯ!!! ಇರಲಿ, ಈಗ, ತಮ್ಮ ಮುಂದ ಏನು ಒಂದು ವ್ಯಕ್ತಿ ಗಂಭೀರವಾಗಿ, ಭವ್ಯವಾಗಿ ಕೂತದ, ಅದರ ವಿಷಯವಾಗಿ ನಾಲ್ಕು ಮಾತು ಹೇಳಿ, ಅವರನ್ನು ತಮಗೆ ಪರಿಚಯ ಮಾಡಿಕೊಡಬೇಕೆಂದ್ರೆ, ಸೂರ್ಯನ ಪರಿಚಯ ಮಾಡಿಕೊಟ್ಟಂತೆಯೇ! ಹೇಗೆ ಸೂರ್ಯನು ಸ್ವಯಂಪ್ರಕಾಶಿತನೋ ಹಾಗೆಯೇ ಇವರು. (ಇಷ್ಟರಲ್ಲಿ, ಕುದುರೆಯ ಹಿಂದೆ ಕುಳಿತಿದ್ದ ಒಬ್ಬ ಮನುಷ್ಯ ಪ್ರಾಣಿಯು ಕುದುರೆಯ ಜವೆಯನ್ನು ಹಿಡಿದುಕೊಂಡಿತು. ಅದರ ನೋವಿಗೆ ಕುದುರೆಯು ಕಾಲನ್ನು ಜಾಡಿಸಿ ಗದ್ದಲಾಟ ಮಾಡಹತ್ತಿತು. ಕಾರ್ಯದರ್ಶಿಗಳು ಅದನ್ನು ಕಂಡು ಸವಾರರಿಗೆ ಕಿವಿಯಲ್ಲಿ ಮೆಲ್ಲಗೆ— 'ಸ್ವಾಮಿ! ತಮ್ಮ ಕುದುರೆಯು ಹಸಿದಂತೆ ಕಾಣುತ್ತದೆ' ಎಂದು ಊದಿ, 'ಏ! ಹ್ವಾಲಂಟೀಯರ! ಬಾ ಇಲ್ಲಿ. ಕುದುರೆಯನ್ನು ಹಿಡಿದುಕೊಂಡು ಹೋಗಿ, ಜೋಕೆಯಿಂದ ನಮ್ಮ ಪಾಗಾದೊಳಗೆ ಕಟ್ಟಿ, ಕಡ್ಲಿದಾಣಿ ತಿನಿಸು, ವೈ ತಿಕ್ಕು" ಎಂದು ಅವನಿಗೆ ಹೇಳಿ ಮತ್ತೆ ತಮ್ಮ ಭಾಷಣವನ್ನು ಆರಂಭಿಸಿದರು. ಸವಾರನು ಕುದುರೆಯ ಲಗಾಮನ್ನು ಬಿಡಬೇಕಾದರೆ ಚಡಪಡಿಸಿದನು. ಜನರ ಎದುರಿಗೆ ಏನೂ ಮಾತನಾಡುವ ಹಾಗಿದ್ದಿಲ್ಲ. ಖಿನ್ನಮನಸ್ಕನಾಗಿ ಕುದುರೆಯನ್ನು ಬಿಟ್ಟುಕೊಟ್ಟನು. ಕಾರ್ಯದರ್ಶಿಗಳು— ಈಗ ಸವಾರರಿಗೆ ವೇಳೆ ಇಲ್ಲದ್ದರಿಂದಲೂ ಪ್ರವಾಸದಿಂದ ಬಹಳ ದಣಿವಾದ್ದರಿಂದಲೂ, ಇವತ್ತಿಗೆ ಈ ಕಾರ್ಯಕ್ರಮವನ್ನು ಮುಗಿಸುತ್ತೇವೆ ಎಂದು ಸೂಚಿಸುವದಕ್ಕೆ ಖೇದವಾಗುತ್ತದೆ. ಉಪಾಯವಿಲ್ಲ. ಪರವೂರವರು ತಮ್ಮ ತಮ್ಮ ಊರಿಗೆ ತಿರುಗಿ ಹೋಗಬಹುದು. ಮುಂದೆ ಸವಡು ಸಿಕ್ಕರೆ, ನಿಮ್ಮೂರಿಗೇ ನೀವು ಕರೆಯಿಸಿಕೊಳ್ಳಬಹುದು. ಅವರ ಪ್ರಸಾದವನ್ನು ಸ್ವೀಕರಿಸಿಕೊಳ್ಳಬಹುದು. 'ಇವತ್ತು ನಮ್ಮ ಹೊಸೂರವರಿಗಷ್ಟೇ ಸಿಗಲಾದೀತು!' ಎಂದು ಸವಾರರೇ ಹೇಳಿದ್ದಾರೆ" ಎಂದು ತಮ್ಮ ಭಾಷಣವನ್ನು ಮುಗಿಸಿದರು. ಆ ವೇಳೆಗೆ, ಕುದುರೆಯ ವಿಚಾರದಲ್ಲಿ ಮಗ್ನನಾದ ಸವಾರನು ಎಚ್ಚತ್ತು ಕಾರ್ಯದರ್ಶಿಯ ಕಡೆಗೆ ನೋಡಿದನು. ಅವರ ಸನ್ನೆಯಿಂದ ಎಲ್ಲರೂ ಮನೆಗೆ ನಡೆದರು. ಜನರೆಲ್ಲ ನಿರಾಶರಾಗಿ 'ಕುದರಿ – ಜವಿ – ಬಿಳಿಗುದರಿ, ಬಿಳಿಗುದ–ರಿ, ಬಿಳಿಗು–ದರಿ' ಎಂದು ಹಾಡುತ್ತ, ರಾತ್ರಿ

ಯಲ್ಲಿಯೇ ತಮ್ಮ ಊರ ಹಾದಿ ಹಿಡಿದರು. ಮಲ್ಲ ಅವರು ಹಾಗೆಯೇ ತಮ್ಮ ಗುಡಿಸಲನ್ನು ಕಾಣಲನುವಾದರು. ಇತ್ತ ಸವಾರನೂ ಕಾರ್ಯದರ್ಶಿಗಳೂ ಸಭಾಪತಿಗಳೂ ಮನೆಗೆ ಸಾಗುತ್ತಿರುವಲ್ಲಿ, ಹಾದಿಯಲ್ಲಿ ಹ್ವಾಲಂಟೀರ ಓಡುತ್ತ ಎದುರಿಗೆ ಬಂದು, ಮುಜುರೆ ಮಾಡಿ, "ಸ್ವಾಮೀ! ಈ ಮಹಾಶಯರ ಕುದುರೆ ದೇವಲೋಕದ್ದು ಕಾಣತದರಿ! ಹುಳ ಹಾರಿ ಹೋಗಲಿ! ಅಂತ ಹೊಗೆ ಹಾಕಿದ ಕೂಡಲೇ, ಒಂದು ಕೊಡ ಅದರ ಹೊಟ್ಟೆಯಿಂದ ಹೊರಗೆ ಬಿತ್ತು. ಅದರ ಹೊಳಪು ನೋಡಿ ಗಾಬರಿಯಾಗಿ ತಮಗೆ ತಿಳಿಸುವದಕ್ಕೆ ಬಂದೆ" ಎಂದು ನುಡಿದನು. ಸವಾರನು ಗಾಬರಿಯಾದನು. ಕೆಲಸ ಘಾತವಾಯಿತೆಂದು ತಳಮಳಿಸಿದನು. ಕಾರ್ಯದರ್ಶಿಗಳು 'ಕೆಲಸ ಸಾಧಿಸಿತೆಂದು' ಆನಂದಪಟ್ಟರು. ಆದರೂ, ಮೇಲೆ ತೋರಗೊಡದೆ, 'ಸವಾರರ! ಏನೋ ಹ್ವಾಲಂಟೀರ! ಚೇಷ್ಟೆ ಮಾಡತೀ ಏನು? ಕುದುರೆ ಎಂದಾದರೂ ಕೊಡ ಈಯುವದುಂಟೇ? ಥೀ ಹೋಗೋ ನಿಮ್ಮಂಜಾಳೋಗಲಿ! ಪೆದ್ದನ ಅಂದ್ರ ಓ ಅಂತಿ' ಎಂದು ಬೆದರಿಸಿದರು. ಅದಕ್ಕೆ ಹ್ವಾಲಂಟೀರನು 'ದ್ಯಾಕ್ರೀ! ಖರೇವಂದ್ರ ದೊಡ್ಡ ಕೊಡ ವಾಸ ಬಂದದರಿ! ಅದರ ಬೆಳಕು ನೋಡಿವರ ಕಣ್ಣು ಕುಕ್ಕತಾವ್ರಿ! ಬರ್ರಿ ಬೇಕಾದ್ರೆ ಮನೆಗೆ, ತೋರಸ್ತೇನಿ.' ಕಾರ್ಯದರ್ಶಿ:— 'ಹೌದೇನ್ರಿ ಸವಾರರ? ಇದೆಂಥ ಆಶ್ಚರ್ಯ! ಯಾಕ್ರಿ ಅಧ್ಯಕ್ಷರ?' ಅಧ್ಯಕ್ಷರು:— 'ಅತ್ಯಾಶ್ಚರ್ಯ! ಅತ್ಯಾಶ್ಚರ್ಯ!!' ಎಂದು ಗೋಣು ಹಾಕಿದರು. ಎಲ್ಲರೂ ಲಗುಬಗೆಯಿಂದ ಮನೆಗೆ ಹೋಗಿ ನೋಡಲು ನಿಜವಾಗಿಯೂ ಚಿನ್ನದ ಕೊಡವಾಗಿತ್ತು. ಅದನ್ನು ಕಂಡು ಅಧ್ಯಕ್ಷರು 'ಇಂದು ಶುಕ್ರವಾರ, ಅನಾಯಾಸವಾಗಿ ಲಕ್ಷ್ಮಿಯು ಪ್ರಸನ್ನಳಾಗಿದ್ದಾಳೆ. ಪೂಜೆ ಮಾಡೋಣ!' ಎಂದು ಸೂಚಿಸಿದರು. ಸವಾರನಿಗೆ ಮಾತು ಬರದಂತಾಯಿತು. ತಾನು ಮಾಡಿದ ಕೆಲಸವನ್ನು ನೆನೆಯುತ್ತಿದ್ದನು. ತನ್ನ ಪರಿವಾರದ ನೆನಪು ಆಯಿತು. ಗುರುವಿನ ಆಜ್ಞೆ ಹೊಳೆಯಿತು. ಕುದುರೆಯು ಕೊಟ್ಟ ಗಂಡಾಂತರದ ಸೂಚನೆಯು ನೆನಪಿಗೆ ಬಂತು. ಆದರೇನು? ಪುನಃ ಸುವರ್ಣಪೂಜೆ ನಡೆಯಿತು, ಕಾರ್ಯದರ್ಶಿಗಳ ಮನೆಯಲ್ಲಿ. ಪೂಜೆ ಮುಗಿದ ಮೇಲೆ ತೀರ್ಥಪ್ರಸಾದವನ್ನು ತಾವು ತೆಗೆದುಕೊಂಡು ಸವಾರನಿಗೂ

ಕಾದಂಬರಿಗಳ ಸುರಿಮಳೆ!     ಮನೋರಂಜಕ ಗ್ರಂಥಗಳು!!

## ರಾ. ದ. ಸೂಗೂರ

ಇವರಿಂದ ರಚಿತವಾಗಿ ಬೇಗನೆ ಹೊರಬೀಳುವವು

# A GREAT RUSH OF NOVELS!

*(To be published in due course)*

by

**R. D. SUGUR.**

## ಪ್ರಕಟಿಸಲಿರುವ ಕೆಲವು ಗ್ರಂಥಗಳು.

೧. ಪಿಕ್ ಪಂಡಿತರು (ಹಾಸ್ಯಯುಕ್ತ ಸಾಮಾಜಿಕ ಕಾದಂಬರಿ.)

೨. The Omni-persent — 'ಸರ್ವಾಂತರ್ಯಾಮಿ' (ಇದನ್ನು ಓದಲೇಬೇಕು!)

೩. Got Married — 'ವಿವಾಹೋತ್ಸವ' (ಆಶ್ಚರ್ಯಕರವಾದ ಕಾದಂಬರಿ!)

೪. My Grand-Father — 'ಅಜ್ಜಪ್ಪ' (ಕಥಾನಿರೂಪಣೆ ಹೊಸದು!)

೫. The great Sankalpa — 'ಮಹಾಸಂಕಲ್ಪ' (ತನ್ನರಿವು ತನಗಿರಬೇಡವೇ?)

೬. Would you like this? — 'ಇದು ಬೇಕೆ?' (ಉತ್ತಮ ಗ್ರಂಥ!)

೭. The great Battle of the Learned Pillars — 'ಕಲ್ಲುಪಂಡಿತರ ಮಹಾಯುದ್ಧ!' (ಕನ್ನಡಿಗರು ಇದನ್ನು ಓದದೆ ಬಿಡಬಾರದು!)

ಗ್ರಂಥಗಳು ದೊರೆಯುವ ಸ್ಥಳ:—

೧. ಸಾಹಿತ್ಯಭಾಂಡಾರ ಹುಬ್ಬಳ್ಳಿ.

೨. ಜಿ. ಕೆ. ಕೇಳಕರ, ಸ್ವದೇಶಿ ಪೇಪರ ಮಾರ್ಟ, ಧಾರವಾಡ.